# ಜೈ ವಿದ್ಯಾರ್ಥಿ !

ವಿಶ್ವ-ರಾಷ್ಟ್ರ-ಸಂಸ್ಕೃತಿ
ಸ್ವದೇಶ-ಸ್ವಭಾಷೆ-ಸತ್ ಸಾಹಿತ್ಯ
ಪರಿಜ್ಞಾನಗಳ ವ್ರತದಿಂದೆ-

ಸತ್ಯ-ಶಿಸ್ತು-ಶಕ್ತಿ-ಶಾಂತಿ
ಜ್ಞಾನ-ವಿಜ್ಞಾನ-ಸುಜ್ಞಾನ
ಅಭಿಜ್ಞಾನಗಳ ಪ್ರೇಮದಿಂದೆ-

ವಿಶ್ವಶಾಂತಿಯ-ವಿಶ್ವಪಂಥದಿ
ವಿಶ್ವಪಾತ್ರಿ-ವಿಶ್ವವೀಥಿ ಮೆಟ್ಟಿ
ವಿಶ್ವಜೀವನೀ ಪಾತ್ರವಾಗೆ-

ಅಂತೇವಾಸಿಗಳ ಸರ್ವೋದ್ಧಾರ !
ಸಂಜೀವನಾ ಪರಮಪಾವನಾ
ಜೈ ವಿದ್ಯಾರ್ಥಿ ! ಜೈ ವಿದ್ಯಾಧನ !

# ರಂಗನ ಸಾಹಸ

(ಶಿಶು ಸಾಹಿತ್ಯ)

ಮಲ್ಲಿಕಾ

ಎಂದು ಮೆಂದಿಗೂ ಇರಲಿ,
ಮಕ್ಕಳ ನಡೆ ನುಡಿಯಲಿ
ಸತ್ಯ ಸಂಧತೆ ವಿಧೇಯತೆ
ಮೇಣ್ ಸದಾಚಾರ ಸಂಪನ್ನತೆ

"ಶ್ರೀ ವಿನಾಯಕಪಾದಾರ್ಪಣಮಸ್ತು"

# ರಂಗನ ಸಾಹಸ

ನೀಮುಲ್ಲಿಕಾ

ಲೇಖಕರು ★ ಪ್ರಕಾಶಕರು
ಲಕ್ಷ್ಮೀ ಪ್ರಕಾಶನ
೩೫೯, ಕಡಿದಾಳ್‌ನಿಲಯ,
೧೪ನೇ ಕ್ರಾಸ್, ಸದಾಶಿವನಗರ
ಬೆಂಗಳೂರು - ೫೬೦ ೦೮೦

ಪರಿವಿಡಿ

# ನಿವೇದನೆ

ನನ್ನ ಮುದ್ದು ಮಕ್ಕಳೇ

ನಿಮಗಾಗಿ, ನಿಮ್ಮ ಮನೋವಿಕಾಸಕ್ಕಾಗಿ ಮತ್ತು ಮನರಂಜನೆಗಾಗಿ ರಂಗನ ಸಾಹಸ ಸೃಷ್ಟಿಯಾಗಿದೆ. ಇಂತಹ ಪುಟ್ಟಪುಟ್ಟ ಕಥಾ ಸಂಕಲನಗಳನ್ನು ಓದಿ ಮನನ ಮಾಡುವುದರಿಂದ ಎಳೆ ಮನಸ್ಸಿಗೆ ಆಹ್ಲಾದ ಉಂಟಾಗಿ ಬುದ್ಧಿ ವಿಕಾಸವಾಗುವುದು ಸಹಜ. ಆದ್ದರಿಂದ ನೀವು ಹೆಚ್ಚುಹೆಚ್ಚಾಗಿ ಶಿಶು ಸಾಹಿತ್ಯವನ್ನು ಓದುವುದು ತುಂಬಾ ಒಳ್ಳೆಯದು. ಮನರಂಜನೆಯಿಂದ ಮನಃಬುದ್ಧಿಗಳು ಹಗುರವಾಗುತ್ತವೆ. ಆಸೆ-ಆಕಾಂಕ್ಷೆಗಳು ಪುಟಿಪುಟಿಯುತ್ತವೆ. ಜೀವ ತಣಿದು ಸಂತೋಷ ಮೂಡುತ್ತದೆ. ಆದ್ದರಿಂದ ಒಳ್ಳೊಳ್ಳೆಯ ಕಥೆಗಳನ್ನು ಓದಿ ಸಕ್ಕರೆಯ ಸವಿಯನ್ನು ಪಡೆಯಿರಿ.

ಶ್ರೀ ಪ್ರಮಾಥಿ ಸಂವತ್ಸರ ನಿಜಜ್ಯೇಷ್ಠ
ಬಹುಳ ಪೌರ್ಣಮಿ ಸೋಮವಾರ
೨೮-೬-೧೯೯೯

ಮಲ್ಲಿಕಾ
೨೮-೬-೧೯೯೯

ತಾಯಿ ಎಲ್ಲಾ ಕಷ್ಟಗಳನ್ನೂ
ಮುಕ್ತಮನದಿಂದ ಭರಿಸುವುದು
ತನ್ನ ಮಕ್ಕಳಿಗಾಗಿ ಎಂಬುದನ್ನು
ನೀನೆಂದೆಂದೂ ಮರೆಯದಿರು ಮಗವೆ !

ಸದ್ಗುಣ ಸಂಪನ್ನತೆಯ ಭೋದನೆ
ಮೂಡುವುದು ತಾಯಿತ ತುಂಬು
ಮನದಿಂದ ಮತ್ತು ಮುಕ್ತ ಹೃದಯದಿಂದ

ವಿದ್ಯಾವಿನಯಗಳು ಹಣದಿಂದ
ಬಾರವು ಎಂದರೆ ತಪ್ಪಲ್ಲ.
ಅವು ಮೂಡಿ ಪ್ರಕಾಶನಕ್ಕೆ
ಬರುವುದು ಆತ್ಮ ದ್ರವ್ಯದಿಂದ

## ಸತ್ಯವ್ರತ

ದಿನೇಶ ಸೌದೆ ಅಂಗಡಿ ಇಟ್ಟಿದ್ದ. ಅವನ ದಿನ ನಿತ್ಯ ವ್ಯಾಪಾರ ಅದೇ.

ಒಮ್ಮೆ ಅವನು ಅಂಗಡಿ ಸಾಲಿಗೆ ಹೋದಾಗ ಒಂದು ಸಣ್ಣ ಕೈಗೊಡಲಿಯನ್ನು ಕೊಂಡು ತಂದ. ಅವನು ಅದನ್ನು ಉಗ್ರಾಣದಲ್ಲಿಟ್ಟು ಅಂಗಡಿಗೆ ಹೋದ.

ಮಧ್ಯಾಹ್ನ ಶಾಲೆಯಿಂದ ಹಿಂದಿರುಗಿದ ಅವನ ಮಗ ಸತ್ಯವ್ರತ ಆ ಸಣ್ಣ ಕೊಡಲಿಯನ್ನು ಕಂಡ. ಅದನ್ನು ಕೈಕೊಂಡು ಆ ಕಡೆ ಈ ಕಡೆ ತಿರುಗಿಸಿ ನೋಡಿದ. ಪುಟ್ಟದಾದ ಅದರ ಹರಿತ ಮನಸ್ಸಿಗೆ ಹಿಡಿಸಿತು. ಕತ್ತರಿಸಿ ನೋಡುವ ಆಸೆಯಿಂದ. ಅಂಗಳದಲ್ಲಿದ್ದ ಅಂಜೂರದ ಮರಕ್ಕೆ ಒಂದು ಏಟು ಹಾಕಿದ. ಅದು ಒಂದೇ ಏಟಿಗೆ ತುಂಡಾಗಿ ಕೆಳಗೆ ಬಿತ್ತು. ಅದರಿಂದ ಬಾಲಕ ಹುರುಪುಗೊಂಡ. ಇತರ ಮರ ಗಿಡಗಳ ಕೊಂಬೆಗಳಿಗೂ ಪೆಟ್ಟು ಬಿತ್ತು. ಎಲ್ಲವೂ ನೆಲದ ಮೇಲೆ ಒರಗಿದುವು. ಅದರ ಹರಿತ ಬಹಳ ಇಷ್ಟವಾಯಿತು ಎಳೆಯ ಮನಸ್ಸಿಗೆ.

ಮಧ್ಯಾಹ್ನ ಮನೆಗೆ ಬಂದ ದಿನೇಶ ನೋಡುತ್ತಾನೆ. ಅಂಜೂರದ ಮರ ಕತ್ತರಿಸಿ ಕೆಳಗೆ ಬಿದ್ದಿದೆ! ಇತರ ಗಿಡಗಳೂ ಕೂಡಾ.

ಆವನು ಆಶ್ಚರ್ಯದಿಂದ ಕೇಳಿದ ''ಇದೇನು? ಯಾರು ಹೀಗೆ ಕತ್ತರಿಸಿದ್ದು?''

ಸತ್ಯವ್ರತ ತಂದೆಯ ಮುಖಬಾವದಲ್ಲಿ ಕಂಡುಬಂದ ಆತಂಕ-ಆಶ್ಚರ್ಯ-ವಿಷಾದಗಳನ್ನು ಗುರುತಿಸಿದಾಗ ತನ್ನ ತಪ್ಪನ್ನು ಸ್ವತಃ ಅರಿತುಕೊಂಡ. ಮನಸ್ಸು ಮುದುಡಿತು ಒಮ್ಮೆಲೇ ನಾಚಿಕೆ-ದುಃಖ-ಸಂಕಟಗಳಿಂದ ತಲೆ ಬಾಗಿದ.

''ನೀನೇ ಕತ್ತರಿಸಿದ್ದು ತಾನೆ?''

''ಹೌದು...''

''ಏತಕ್ಕಾಗಿ? ಇದು ಒಳ್ಳೆಯ ಮರ ಎಂಬುದು ನಿನಗೆ ತಿಳಿಯದೆ?''

''ತಿಳಿದಿತ್ತು ಕೈಗೊಡಲಿಯನ್ನು ಕಂಡಾಗ ನಾನು ಅದನ್ನು ಮರೆತುಬಿಟ್ಟಿದ್ದು ಶುದ್ಧ ತಪ್ಪು. ಕೊಡಲಿಯ ಹರಿತ ನನ್ನ ಮತಿಗೆಡಿಸಿತು. ತಪ್ಪು ಮಾಡಿಬಿಟ್ಟೆ. ದಯವಿಟ್ಟು ಕ್ಷಮಿಸಿರಿ.''

ಬಾಲಕ ವಿನೀತನಾಗಿ ತಪ್ಪನ್ನು ಒಪ್ಪಿಕೊಂಡುದುದು ತಂದೆಗೆ ವ್ಯಸನವನ್ನು ಮರೆಸಿತು. ಮಗನ ಸತ್ಯಸಂಧತೆ ಸಂತಸ ಮೂಡಿಸಿತು. ಕೂಡಲೇ ಅವನು ಹೇಳಿದ ''ನೀನು ಮಾಡಿದ ತಪ್ಪನ್ನು ಮುಚ್ಚಿಡದೆ ಒಪ್ಪಿಕೊಂಡುದು ತುಂಬ ಸಂತೋಷ. ಎಂದೂ, ಯಾವತ್ತೂ, ಯಾವ ಕಾರಣಕ್ಕೂ ಸುಳ್ಳು ಹೇಳಬಾರದು. ನೀನು ಹೀಗೆಯೇ ಮುಂದೆಯೂ ಸತ್ಯ ನುಡಿಯುವುದನ್ನೇ ಅಭ್ಯಾಸದಲ್ಲಿಟ್ಟುಕೋ, ಅದರಿಂದ ನಿನ್ನ ಭವಿಷ್ಯಕ್ಕೆ ತುಂಬಾ ಒಳ್ಳೆಯದು. ನಿನ್ನನ್ನು ಕ್ಷಮಿಸಿರುವೆ. ಇನ್ನು ಮುಂದೆ ಹೀಗೆ ದುಡುಕಬೇಡ ಕಂಡೆಯಾ?''

“ಆಗಲಿ, ಅಪ್ಪಾ!”

“ನಿನ್ನನ್ನು ದಂಡಿಸುವುದಿಲ್ಲ. ಸತ್ಯವ್ರತನಾಗಿ ಬಾಳು.”

“ಒಳ್ಳೆಯದು.”

ಸತ್ಯವ್ರತ ಎಂದೆಂದಿಗೂ ಸುಳ್ಳು ಹೇಳದ ಪರಿಯಲ್ಲಿ ಸತ್ಯವ್ರತನಾಗಿ ಬಾಳಿ ಜೀವನದಲ್ಲಿ ಒಳ್ಳೆಯ ಹೆಸರು ಗಳಿಸಿ ಕೀರ್ತಿವಂತನಾದ.

ಕೈಗಳಿಗೆ ಕೆಲಸವೆ ಚೆಲುವು
ಕಾಲ್ಗಳಿಗೆ ಒಳ್ನಡೆಯೆ ಚೆಲುವು
ನಾಲಿಗೆಗೆ ನಲ್ನುಡಿಯೆ ಚೆಲುವು
ಚಿತ್ತಕೆ ಚಿನ್ಮಯತೆಯೆ ಚೆಲುವು
ಮನಕೆ ಮಧುರ ನೆನಹೆ ಚೆಲುವು
ಮಕ್ಕಳಿಗೆ ಮಂಗಳವೆ ಚೆಲುವು



# ಚಂದೀರಾಮ

ಚಂದೀರಾಮ ವಿದ್ಯೆ ಬುದ್ಧಿ ಇಲ್ಲದ ಪೋರ.

ಅವನಿಗೆ ಏಳೆಂಟು ವರ್ಷಗಳಾಗಿದ್ದರೂ ತಂದೆ ತಾಯಿಯರ ಮುದ್ದು ಬಹಳ. ಅವನು ಅಲ್ಲಿ-ಇಲ್ಲಿ ತಿರುಗಾಡಿ ಶಾಲೆಗೆ ಹೋಗಿದ್ದೆ ಎಂದು ಸುಳ್ಳು ಹೇಳುತಿದ್ದ. ತಂದೆ, ತಾಯಿ ಅವನನ್ನು ನಂಬುತಿದ್ದರು. ಹುಡುಗ ಖುಷಿಯಿಂದ ಎಲ್ಲೆಲ್ಲೋ ಸುತ್ತಾಡಿ ಯಾರ್ಯಾರ ತೋಟಗಳ ಕಾಯಿಕಡ್ಡೆಗಳನ್ನೊ ಕಿತ್ತು ತಿಂದುಬಿಡುತ್ತಿದ್ದ. ಒಮ್ಮೆ ಅವನು ಮಾವಿನ ಕಾಯಿ ಕೀಳುತಿದ್ದಾಗ ತೋಟದ ಒಡೆಯನ ಕೈಗೆ ಸಿಕ್ಕಿದ. ನಾಲ್ಕಾರು ಹೊಡತ ಸರಿಯಾಗಿ ಬಿದ್ದುವು. ಚಂದೀರಾಮ ಅಳುತ್ತಾ ಹಿಂದಿರುಗುವಾಗ ದಾರಿಯಲ್ಲಿ ದೊಡ್ಡ ನೇರಳೆ ಮರ ಕಂಡ. ತಲೆಯೆತ್ತಿ ನೋಡಿದರೆ ಎಂತಹ ಹುಲುಸು ಬೆಳೆ! ಮಾಗಿದ ನೀಲಗಪ್ಪು ಹಣ್ಣುಗಳ ಗೊಂಚಲುಗಳು! ಮರದ ತುಂಬೆಲ್ಲಾ ಹಕ್ಕಿಗಳ ಹಿಂಡೇ ಹಿಂಡು.

ಆ ಮರ ಯಾರ ತೋಟದ್ದೂ ಅಲ್ಲ. ರಸ್ತೆ ಬದಿಯ ಹೆಮ್ಮರ. ಯಾರು ಬೇಕಾದರೂ ತಿನ್ನಬಹುದಾದ ಹಣ್ಣು. ಹುಡುಗನಿಗೆ ಆಸೆ ಕುದುರಿತು. ತಲೆಯೆತ್ತಿ ನೋಡಿದರೆ ಬಾರೀ ಮರ. ಅದನ್ನು ಹತ್ತುವುದು ಅಸಾಧ್ಯ. ಹಕ್ಕಿಗಳು ಹಣ್ಣ ತಿಂದು ತಿಂದು ಬೀಜ ಉಗುಳುತ್ತಿವೆ. ಮರದ ಬುಡದಲ್ಲಿ ಬೀಜಗಳ ರಾಶಿ.

ಚಂದೀರಾಮ ಒಂದು ಕಲ್ಲು ತೆಗೆದು ಹಣ್ಣು ಗೊಂಚಲ ನೇರಕ್ಕೆ ಬೀಸಿ ಒಗೆದ. ಆ ಕಲ್ಲು ಬಿರುಸಾಗಿ ತಾಗಿದ್ದು ಹಣ್ಣು ಗೊಂಚಲಿಗಲ್ಲ; ಹಣ್ಣು ತಿನ್ನುತಿದ್ದ ಹಿರಿಯ ಮಂಗಕ್ಕೆ. ಅದು ಕಣ್ಣಿಗೆ ಕಾಣಿಸಿರಲಿಲ್ಲ. ಎಲೆಗೊಂಚಲ ಮಧ್ಯೆ ಅದೆಲ್ಲಿ ಅಡಗಿತ್ತೋ, ಸಿಟ್ಟಿನಿಂದ ಕಿರ್ರನೆ ಕಿರುಚುತ್ತ ಸರ್ರನೆ ಇಳಿದು ಬಂತು! ಹುಡುಗ ಹೆದರಿ ಓಡತೊಡಗಿದರೂ ಬಿಡದೆ ಹಿಂದೆಯೇ ದೌಡಾಯಿಸಿ ಬಂತು! ಚಂದೀರಾಮ 'ಹೋ' ಎಂದು ಅಳುತ್ತ ಓಡುವಾಗ ಕಲ್ಲೆಡವಿ ಮುಗ್ಗರಿಸಿ ಬಿದ್ದ. ಆ ಕೂಡಲೇ ಯಾರೋ ಕೋತಿಗೆ ಕಲ್ಲು ಬೀಸಿ ಒಗೆದು ಓಡಿಸಿದರು. ಹುಡುಗ ಎದ್ದು ನಿಂತ. ಮೈಕೈ ಮಣ್ಣಾಗಿದ್ದು ಮಾತ್ರವಲ್ಲ; ಮಂಡಿಗೆ ಕಲ್ಲುತಾಗಿ ರಕ್ತ ಹರಿದಿತ್ತು. ನಲ್ಲಿ ನೀರಿನಲ್ಲಿ ಕೈಕಾಲು ತೊಳೆದುಕೊಂಡ ಚಂದೀರಾಮ.

ಹೊತ್ತು ನೆತ್ತಿಗೇರಿರಲಿಲ್ಲ. ಮನೆಗೆ ಹೋದರೆ ಏಕೆ ಬೇಗ ಬಂದೆ? ಎಂದು ಕೇಳುತ್ತಾಳೆ ತಾಯಿ. ಹೀಗೆಯೇ ಸ್ವಲ್ಪ ಹೊತ್ತು ಎಲ್ಲಾದರೂ ಆಟ ಆಡಿ ಹೋಗೋಣ ಎಂದುಕೊಂಡ ಚಂದೀರಾಮ ಆಟದ ಬಯಲಿಗೆ ಹೋದ. ಅಲ್ಲಿ ನಾಲ್ಕಾರು ಹುಡುಗರು ಗೋಲಿ ಆಡುತಿದ್ದರು. ಅವರ ಕೂಟಕ್ಕೆ ಕೂಡಿದ. ಸ್ವಲ್ಪ ಹೊತ್ತು ಆಟ ಸಾಗಿತು.

ದೂರದಲ್ಲಿ ಗೋಪುರದ ಗಡಿಯಾರ ಗಂಟೆ ಬಾರಿಸಿತು. ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು, ಹತ್ತು, ಹನ್ನೊಂದು, ಹನ್ನೆರಡು.

ಚಂದೀರಾಮ ಆಟ ಬಿಟ್ಟು ಹೊರಟ.

''ಯಾಕೋ ಈಗಲೇ ಹೊರಟೆ?''

''ಮನೆಯಲ್ಲಿ ಅಮ್ಮ ಕಾದಿರುತ್ತಾರೆ.''

''ಓಹೋಹೋ! ನಿನಗೆ ಮಾತ್ರ ಅಮ್ಮ-ಮನೆ. ನಮಗಿಲ್ಲವೋ?''

''ಈಗ ಶಾಲೆ ಬಿಡುವ ಹೊತ್ತು. ನಿಜವಾಗಿಯೂ ಅಮ್ಮ ಕಾದಿರುತ್ತಾರೆ.''.

''ಕಾದರೆ ಕಾಯಲಿ. ಅದರಿಂದ ಆಗುವುದೇನು?''

ಸರಿ. ಅವರೊಳಗೆ ವಿವಾದ ಹುಟ್ಟಿತು ಮಾತಿಗೆ ಮಾತು-ಜಗಳ-ಸಿಟ್ಟು-ಕೋಪ-ಹೊಡೆದಾಟ. ಅಷ್ಟಕ್ಕೂ ತೃಪ್ತಿಯಾಗದ ಹುಡುಗರು ಅವನನ್ನು ತಳ್ಳಿದರು. ಮುಖಮಡಿಯಾಗಿ ಬಿದ್ದ ಚಂದೀರಾಮ ಮುಂಬಲ್ಲು ಮುರಿದುಕೊಂಡ. ತುಟಿ-ಬಾಯಿಗಳಲ್ಲಿ ನೆತ್ತರು ಸುರಿಯಿತು. ಬಿಳಿಯ ಷರಟಿನ ಮೇಲೆ ನೆತ್ತರಿನ ಕಲೆ. ಬೀದಿ ನಲ್ಲಿಯಲ್ಲಿ ನೀರು ನಿಂತುಹೋಗಿತ್ತು. ಕೈ ಕಾಲಿಗೆ ಎಲ್ಲಿಯೂ ನೀರು ಸಿಗಲಿಲ್ಲ. ಅಳುತ್ತಲೇ ಮನೆಗೆ ಹೋದ ಚಂದೀರಾಮ. ಅವನ ಸ್ಥಿತಿಗತಿಯನ್ನು ದೂರದಿಂದಲೇ ಕಂಡಳು ತಾಯಿ.

''ಇದೇನು? ಏಕೆ ಹೀಗಾಯ್ತು?''

ಊ...ಊ...ಅಳು-ಅಳು. ಒಂದೇಸಮನೆ ಅಳು.

''ಏನಾಯ್ತು? ಮಾಸ್ತರು ಹೊಡೆದರೆ? ಹೇಳು ಮಗೂ!''

''ಇಲ್ಲ....''

''ಏನಾಯ್ತು ಚಂದೂ?''

ಚಂದೀರಾಮ ಅಳುತ್ತ ನಡೆದ ವಿಷಯವನ್ನು ತಿಳಿಸಿದ.

''ಇನ್ನು ಮುಂದೆ ಹೀಗೆ ಪೋಲಿ ತಿರುಗಬೇಡ ಕಂಡೆಯಾ?''

''ಇಲ್ಲವ್ಮಾ, ಇನ್ನೆಂದೂ ನಾನು ಖಂಡಿತ ಶಾಲೆಗೆ

ತಪ್ಪಿಸಿಕೊಳ್ಳುವುದಿಲ್ಲ.''

''ಇದು ಖಂಡಿತವೇ ಮಗೂ?''

''ಖಂಡಿತ....!''

ತಾಯಿ ಅವನನ್ನು ಸಂತೈಸಿ ಸ್ನಾನ ಮಾಡಿಸಿದಳು. ಮುಂದೆ ಅವನು ಶಾಲೆಯನ್ನು ತಪ್ಪಿಸಿಕೊಳ್ಳಲಿಲ್ಲ. ಚೆನ್ನಾಗಿ ಓದಿ ಬುದ್ಧಿವಂತನಾದ. ತಂದೆ ತಾಯಿಯರೂ ಮೆಚ್ಚಿದರು. ಶಾಲೆಯ ಮಾಸ್ಟರೂ ಒಪ್ಪಿದರು.

ಮನೆ ಬೆಳಗೆ ಮನ ಬೆಳಗೆ
ಸದಾ ಸ್ವಾಭಾವಿಕ ಸದ್ವರ್ತನೆ
ಇರಲಕ್ಕು ಕುಲದೀಪಕರಿಗೆ



## ಜಾಣ ಕತ್ತೆ

ಸಂತೂರಿನಲ್ಲಿದ್ದ ಅಗಸನ ಹೆಸರು ಸಾಂತ.

ಅವನ ಬಳಿ ಒಂದು ಮುದ್ದಾದ ಕತ್ತೆಯಿತ್ತು.

ಅವನ ಅದನ್ನು ಬಹಳ ಪ್ರೀತಿಸುತಿದ್ದ. ಅದಕ್ಕೆ ಕೆಲಸ-ತಿಂಡಿ ಹದವರಿತು ಕೊಡುತಿದ್ದ. ಅವನ ಬಳಿ ಅದು ಸುಖವಾಗಿತ್ತು. ಆ ಯಜಮಾನನಲ್ಲಿ ಅದಕ್ಕೂ ಬಲು ಪ್ರೀತಿ.

ಸಾಂತ ಅದರ ಬೆನ್ನು ತಲೆಗಳನ್ನು ಚಪ್ಪರಿಸುತ್ತ 'ನೀನು ಬಲು ಜಾಣ ಕತ್ತೆ!' ಎಂದು ಮುದ್ದಿಸುತಿದ್ದ. ಕತ್ತೆಗೆ ತನ್ನ ಜಾಣತನ ಏನೂ ಅರ್ಥವಾಗಿರಲಿಲ್ಲ; ಸುಮ್ಮನೆ ತಲೆಯಾಡಿಸಿ ಅರ್ಥವಾದಂತೆ ತೋರಿಕೊಳ್ಳುತಿತ್ತು ಅಷ್ಟೆ.

ಅಂದು ಅಗಸ ಸೌದೆಗಾಗಿ ಕಾಡಿಗೆ ಹೋಗುವಾಗ ತನ್ನೊಂದಿಗೆ ಕತ್ತೆಯನ್ನೂ ಕರೆದೊಯ್ದ ಸೌದೆಯ ಹೊರೆಯನ್ನು ಹೊರಿಸುವ ಸಲುವಾಗಿ. ಕಾಡಿನಲ್ಲಿ ಹಸಿರು ಹುಲ್ಲಿರುವ ಕಡೆ ಅದನ್ನು ಮೇಯಲು ಬಿಟ್ಟು ತಾನು ಸೌದೆ ಹುಡುಕಲು ಕಾಡಿನೊಳಗೆ ಹೋದ.

ಸ್ವಲ್ಪ ಸಮಯ ಕಳೆಯಿತು. ಕತ್ತೆ ಹುಲ್ಲು ಮೇಯುತಿತ್ತು. ಯಜಮಾನ ಸೌಧೆ ಕಡಿಯುವ ಸದ್ದು ಕೇಳಿಸುತ್ತಿದೆ. ಅದೇ ಸಮಯಕ್ಕೆ ಹಸಿದ ತೋಳವೊಂದು ಅಲ್ಲಿಗೆ ಬಂದು ಕತ್ತೆಯನ್ನು ನೋಡಿತು. ಎಂತಹ ದುಂಡು ಮೈಯಿನ ಕತ್ತೆ!

ತೋಳಕ್ಕೆ ಆ ಕೂಡಲೇ ಬಾಯಿಯಲ್ಲಿ ನೀರೂರಿತು. ತಾನೊಂದೆಯಾದ್ದರಿಂದ ಕತ್ತೆಯನ್ನು ಕೊಲ್ಲುವುದು ಸಾಧ್ಯವಿಲ್ಲ. ತನ್ನವರನ್ನು ಕರೆತರಲು ಹೋದರೆ ಇತ್ತ ಕತ್ತೆ ಓಡಿ ಹೋಗಬಹುದು. ಏನು ಮಾಡಲಿ? ಕೊಲ್ಲುವುದು ಹೇಗೆ? ಎಂದು ಯೋಚಿಸುತ್ತ ಬಿರುಗಣ್ಣಿನಿಂದ ನೋಡುತಿತ್ತು ತೋಳ. ಕತ್ತೆ ತಲೆಯೆತ್ತಿ ನೋಡಿದರೆ ಕೆಂಗಣ್ಣಿನ ತೋಳ! ಒಡನೆ ಗಡಗಡನೆ ನಡುಗಿತು ಮೈ. ಆದರೂ ಅಳುಕನ್ನು ತೋರಿಸಿಕೊಳ್ಳದೆ ಹೇಳಿತು ''ಅಯ್ಯಾ ತೋಳಣ್ಣಾ! ಇದುವರೆಗೂ ನಿನಗಾಗಿಯೇ ಕಾದಿದ್ದೆ ನಾನು! ನನ್ನ ಯಜಮಾನ ನಿನ್ನನ್ನು ಕರೆತರಲು ಹೇಳಿದ್ದಾನೆ!''

''ಯಾರು ನಿನ್ನ ಯಜಮಾನ? ನನ್ನನ್ನೇಕೆ ಕರೆತರಲು ಹೇಳಿದ್ದಾನೆ?''

''ನಿನಗಾಗಿ ಒಂದು ಜಿಂಕೆಯನ್ನು ಕೊಂದು ಕಾಯುತಿದ್ದಾನೆ!''

''ನನಗಾಗಿ ಕೊಂದಿದ್ದಾನೆಯೇ?''

''ಹೌದು. ನಿನಗಾಗಿಯೇ ಕೊಂದದ್ದು! ಎಂಥ ಚೆನ್ನಾದ ಜಿಂಕೆ!''

''ಎಲ್ಲಿ ತೋರಿಸು.''

''ನನ್ನ ಹಿಂದೆ ಬಾ!''

ಕತ್ತೆ ಯಜಮಾನನಿದ್ದಲ್ಲಿಗೆ ನಡೆಯಿತು. ತೋಳ ಹಿಂಬಾಲಿಸಿತು. ಪೊದೆಯಾಚೆ ತನ್ನ ಯಜಮಾನನನ್ನು ಕಂಡೊಂಡನೆಯೇ ಕತ್ತೆ ಗಟ್ಟಿಯಾಗಿ ಅರಚುತ್ತ ಬಳಿಗೆ ಓಡಿತು. ಯಜಮಾನ ನೋಡುತ್ತಾನೆ ಕೆಂಗಣ್ಣಿನ ತೋಳ! ಕೂಡಲೇ

ಅವನು ಬಡಿಗೆಯಿಂದ ಅದರ ತಲೆಗೆ ಬಲವಾಗಿ ಬೀಸಿದ. ಅದು ಪೆಟ್ಟು ತಾಳಲಾರದೆ ಉರುಳುರುಳಿ ಬಿತ್ತು! ಸಾಂತ ಮತ್ತೆ ಮತ್ತೆ ಬಡಿದು ಅದನ್ನು ಸಾಯಿಸಿದ.

ಆಗ ಕತ್ತೆಗಾದ ಆನಂದ ಅಷ್ಟಿಷ್ಟಲ್ಲ. ಹಿಂಗಾಲುಗಳನ್ನೆತ್ತಿ ಕುಣಿಯುತ್ತಾ ಒರಟು ರಾಗದಿಂದ ಹಾಡಿತು. ಸಾಂತಣ್ಣಾ! ನೀನು ಬಲು ಗಟ್ಟಿಗನಣ್ಣಾ! ನಿನ್ನ ನಂಬಿ ನನ್ನ ಬದುಕು ಬಂಗಾರವಣ್ಣಾ!' ಸಾಂತ ಅದರ ಬೆನ್ನು ಚಪ್ಪರಿಸುತ್ತ 'ನೀನು ಜಾಣಕತ್ತೆ!' ಎಂದ,

ಕದಿಯುವ ಹೇಯ ಕೃತ್ಯಕ್ಕಿಂತ
ದುಡಿದು ಉಣ್ಣುವುದು ಪರಮ ಲೇಸು.

ಬಿಕ್ಷೆ ಬೇಡುವುದಕ್ಕಿಂತ ಕೈತುಂಬ
ದುಡಿಯುವುದು ಮತ್ತೂ ಲೇಸು.



# ಪಿಯೋರಿ

ಜಪಾನ್ ದೇಶದಲ್ಲಿ ಪಿಯೋರಿ ಎಂಬ ಶಾಲಾ ಬಾಲಕನಿದ್ದ. ಅವನು ಕಷ್ಟಪಟ್ಟು ಓದುತಿದ್ದರೂ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಿರಲಿಲ್ಲ. ವರ್ಷವರ್ಷವೂ ಅವನಿಗೆ ಸೋಲು ಕಟ್ಟಿಟ್ಟ ಬುತ್ತಿ. ಅದರಿಂದ ಪಿಯೋರಿ ತುಂಬ ದುಃಖಪಡುತಿದ್ದ. ಓದಲೇಬೇಕೆಂಬ ಆಸೆ ಬಲವಾಗಿದ್ದುದರಿಂದ ಶಾಲೆಯನ್ನು ಬಿಡದೆ ಕಲಿಯುತಿದ್ದ.

ಅವನ ತಾಯಿ ಒಮ್ಮೆ ಹೇಳಿದಳು ''ಮಗನೇ! ನೀನು ದಿನಾ ಓದಿ ಓದಿ ತಲೆ ಕೆಡಿಸಿಕೊಳ್ಳುತಿದ್ದಿ. ಸುಜುಕಿ ಬೆಟ್ಟದ ಮೇಲೆ ಮಾಸುಕಿ ದೇವತೆಯ ಗುಡಿಯಿದೆ. ನೀನು ಅಲ್ಲಿಗೆ ಹೋಗಿ ದೇವತೆಯನ್ನು ಬೇಡಿಕೊ. ಅವಳು ಆಶೀರ್ವದಿಸಿದರೆ ನಿನಗೆ ಒಳ್ಳೆಯದಾಗುತ್ತೆ. ಹೋಗಿ ಬಾ ಮಗನೇ!''

ಸುಜುಕಿ ಬೆಟ್ಟ ಇರುವುದು ದೂರದಲ್ಲಿ. ದಿನವೆಲ್ಲಾ ನಡೆದರೆ ಬೆಟ್ಟ ಏರುವುದು ಸಂಜೆಗೆ. ರಾತ್ರಿ ಆ ಗುಡಿಯಲ್ಲೆ ತಂಗಿದ್ದು ಮರು ದಿನ ಊರಿಗೆ ಹಿಮ್ಮರಳಬೇಕು.

ತಾಯಿ ಯಾಸೂಕಿ ಮಗನಿಗೆ ಎರಡು ದಿನಗಳಿಗಾಗುವಷ್ಟು ರೊಟ್ಟಿ ಕಟ್ಟಿಕೊಟ್ಟಳು. ಅವನು ಬುತ್ತಿಯನ್ನು ತನ್ನ ಚೀಲದಲ್ಲಿಟ್ಟುಕೊಂಡು ಹೊತ್ತಿಗೆ ಮುಂಚೆ ಹೊರಟ. ಬಿಸಿಲೇರುವವರೆಗೆ ಹಾದಿಯ ನಡಿಗೆ ಸುಗಮ ಮತ್ತು ಸರಾಗ.

ಅನಂತರ ರಣರಣ ಬಿಸಿಲಲ್ಲಿ ಮೈ ಬೆವರಿಳಿಯತೊಡಗಿತು. ಮೈಯಲ್ಲಿ ಆಯಾಸ, ಕಾಲುಗಳಲ್ಲಿ ಸೋಲು, ಹುಡುಗ ಬಳಲಿದ. ಎಲ್ಲಿಯೂ ನೆರಳು ಕೊಡುವಂತಹ ದೊಡ್ಡ ಮರಗಳಿಲ್ಲ, ಅಲ್ಲಲ್ಲಿ ಕುರುಚಲ ಗಿಡಗಳು, ದೊಡ್ಡ ದೊಡ್ಡ ಹೆಬ್ಬಂಡೆಗಳು. ದೂರ ದೂರಕ್ಕೊಂದು ಸಣ್ಣ ಪುಟ್ಟ ಮರಗಳು. ಪಿಯೋರಿ ಸುತ್ತಮುತ್ತ ನೋಟ ಹರಿಸಿದ. ತನಗೆ ಎಲ್ಲಿಯೂ ತಂಪಿನ ಆಸರೆ ಕಾಣಲಿಲ್ಲ.

ನನ್ನ ತಾಯಿ ಇಷ್ಟು ದೂರ ಕಳಿಸಿದಳಲ್ಲಾ, ನನ್ನಿಂದ ಮುಂದಿನ ಪಯಣ ಸಾಧ್ಯವೇ? ಎಂದು ಗೋಳಾಡುತ್ತ ರೊಟ್ಟಿಯ ಬುತ್ತಿ ಬಿಚ್ಚಿದ. ರೊಟ್ಟಿಯೊಂದಿಗೆ ಬೆಣ್ಣೆ-ಮೊಸರು ಇತ್ತು. ರೊಟ್ಟಿ ತಿಂದು ಮೊಸರು ಕುಡಿದು ದಣಿವಾರಿಸಿಕೊಂಡ. ಸುಡು ಬಿಸಿಲಿನಿಂದ ಹೆಚ್ಚು ಹೊತ್ತು ಕೂರಲಾಗಲಿಲ್ಲ. ಅಲ್ಲದೆ, ಕತ್ತಲಾಗುವುದರೊಳಗೆ ಬೆಟ್ಟದ ನೆತ್ತಿಯನ್ನು ಏರಲೇಬೇಕು. ಇಲ್ಲದಿದ್ದರೆ, ಎಲ್ಲಿಯೂ ತಂಗಲು ನೆಲೆಯಿರಲಿಲ್ಲ.

ಪಿಯೋರಿ ಬೆಟ್ಟ ಏರುತಿದ್ದಂತೆ ಮತ್ತಷ್ಟು ಬಳಲಿದ. ಇನ್ನು ನಡೆಯಲಾರೆ ಎಂದು ಚೀರುವಷ್ಟು ಕಾಲುಗಳಲ್ಲಿ ಅತೀವ ನೋವು. ಹುಡುಗ ಹತ್ತಲಾರದೆ ಹತ್ತುತ್ತ ಬೆಟ್ಟದ ಮೇಲಿನ ಗುಡಿಯ ಕಡೆ ನೋಡಿದ. ಅರೆ! ಯಾರೋ ಮುಂದಿನ ಸಾಲು ಮೆಟ್ಟಿಲುಗಳನ್ನು ಏರಿ ಹೋಗುತಿದ್ದಾರೆ. ನೆತ್ತಿಯಿಂದ ಹಿಡಿದು ಕಾಲಿನವರೆಗೂ ಬಿಳಿಯುಡುಪು. ಸಡಿಲವಾದ ಉಡುಪು ಗಾಳಿಯಾಟಕ್ಕೆ ಹಾರಾಡುತ್ತಿದೆ. ಬೆನ್ನಿನ ಕಡೆಯಾದುದರಿಂದ ಹೆಣ್ಣೋ ಗಂಡೋ ತಿಳಿಯಲಾಗಲಿಲ್ಲ.

ಯಾರಾದರೇನು?

ನನಗೆ ಜೊತೆಗಾರರು ಸಿಕ್ಕಿದಂತಾಯಿತು ಎಂಬ ಸಮಾಧಾನ ಮನಸ್ಸಿಗೆ. ಒಂದಿಷ್ಟು ಸದ್ದು ಮಾಡಿದರೆ ಅವರು ಹಿಂದಿರುಗಿ ನೋಡಬಹುದು ಎನಿಸಿತು. ಗಂಟಲು ಗೊರಗೊರ ಸದ್ದು ಮಾಡಿ ಕೆಮ್ಮಿದ.

ಆದರೂ ಅವರು ಹಿಂದಿರುಗಿ ನೋಡಲಿಲ್ಲ. ನಿಧಾನವಾಗಿ ಹತ್ತುತ್ತಲೇ ಇದ್ದಾರೆ. ಅವರನ್ನು ನೋಡುತಿದ್ದಂತೆಯೇ ಮೈಯಲ್ಲಿ ಲವಲವಿಕೆ ಮೂಡಿತು. ಮೈ ಬಳಲಿಕೆ ಕಾಲುನೋವು ಮಂಗಳಮಾಯ! ಹುಡುಗನಿಗೆ ಆಶ್ಚರ್ಯವೋ ಆಶ್ಚರ್ಯ!.

ಬಿಳಿಯುಡುಪು ತೊಟ್ಟವರನ್ನು ಪಿಯೋರಿ ಹಿಂಬಾಲಿಸಿದ. ಗುಡಿ ಅಂಗಳವನ್ನು ಸೇರಿದೊಡನೆ ಅವರು ಗುಡಿಯೊಳಗೆ ಹೋದುದನ್ನು ಕಂಡ. ಒಳ ಹೋದರೆ ಯಾವ ಸದ್ದೂ ಇಲ್ಲ. ಪಿಯೋರಿ ಒಳಗೆಲ್ಲಾ ಸುತ್ತಾಡಿ ನೋಡಿದ. ದೇವರ ವಿಗ್ರಹ ವಿನಾ ಮತ್ತೇನೂ ಕಾಣಿಸಲಿಲ್ಲ.

ಒಳ ಹೋದವರು ಯಾರಿರಬಹುದು? ಒಮ್ಮೆಗೇ ಕಣ್ಮರೆಯಾಗಲು ಕಾರಣವೇನು?

ಹುಡುಗ ಸ್ವಲ್ಪ ಹೊತ್ತು ಯೋಚಿಸಿದ ನಂತರ ದೇವರೆಡೆಗೆ ಗಮನ ಕೊಟ್ಟ. ದೇವತೆಯ ಪಾದದ ಬಳಿ ಬಹಳಷ್ಟು ನಾಣ್ಯಗಳು ಬಿದ್ದಿದ್ದುವು. ತಾನು ತಂದಿದ್ದ ಒಂದೆರಡು ನಾಣ್ಯಗಳನ್ನು ಪಾದದ ಬಳಿ ಇಟ್ಟು ಭಕ್ತಿಯಿಂದ ನಮಸ್ಕರಿಸಿದ. ಯಾಕೋ, ಏನೋ, ನನ್ನನ್ನು ಪರೀಕ್ಷೆಯಲ್ಲಿ ಗೆಲಿಸು ಎಂದು ಕೇಳಿಕೊಳ್ಳುವ ಆಸೆ ಮೂಡಲೇ ಇಲ್ಲ. ಪೀಠದ ಮುಂದೆ ಸಣ್ಣ ದೀಪ ಉರಿಯುತಿದ್ದುದರಿಂದ ಒಳಗೆಲ್ಲಾ ಸಣ್ಣ ತಿಳಿ ಬೆಳಕು. ಬಾಲಕ

ರೊಟ್ಟಿ ತಿಂದು ಗೋಡೆಯ ಬದಿಯಲ್ಲಿ ಮಲಗಿಕೊಂಡ. ಬಹಳ ದಣಿದಿದ್ದುದರಿಂದ ಬೇಗನೆ ನಿದ್ದೆ ಬಂದಿತು. ಕನಸಿನಲ್ಲಿ ಅದೇ ಬಿಳಿಯುಡುಪಿನ ದೇವತೆ ಕಾಣಿಸಿದಳು, ಆಗ ನೋಡಿದ್ದು ಬೆನ್ನಿನ ಕಡೆಯಿಂದ. ಈಗ ನೋಡಿದ್ದು ಎದುರುಗಡೆಯಿಂದ. ಮಾಸುಕಿ ದೇವತೆಯೇ ಅವಳು.

ಅವಳು ತಲೆಯ ಮೇಲೆ ಕೈಯಿಟ್ಟು ಹೇಳಿದಳು ''ಮಗನೇ! ನೀನು ನಾಳೆ ಇಲ್ಲಿದ್ದು ನಾಡಿದ್ದು ಹೊರಡು!'' ಹುಡುಗ ತಟ್ಟನೆ ಕಣ್ಣು ಬಿಟ್ಟ. ದೇವತೆ ವಿಗ್ರಹವನ್ನು ಸೇರಿಕೊಂಡಳು. ಒಬ್ಬನೇ ಇಲ್ಲಿ ಒಂದು ದಿನ ಕಾಲ ಕಳೆಯುವ ಬಗೆ ಹೇಗೆ? ಎಂಬ ಯೋಚನೆ ಬಂತು. ತನನಲ್ಲೇ ಸ್ವಲ್ಪ ಹೊತ್ತು ಯೋಚಿಸಿ.... ಏನಾದರಾಗಲಿ. ನಾನಿಂದು ಹೊರಟುಬಿಡುವೆ. ಇನ್ನೊಮ್ಮೆ ಬಂದು ಎರಡು ದಿನ ಇದ್ದರಾಯಿತು ಎಂದುಕೊಂಡ. ಬೆಳಗಾಗುತ್ತಲೂ ದೇವತೆಗೆ ನಮಸ್ಕಾರ ಹಾಕಿ ಹೊರಟೇಬಿಟ್ಟ.

ಆದರೆ ಕಾಲುಗಳು ನಡೆಯಲೊಲ್ಲವು. ಮೈಯಲ್ಲಿ ಬಲವೇ ಇಲ್ಲದಷ್ಟು ಹಿಂಸೆ. ಸ್ವಲ್ಪ ಹೊತ್ತು ಮೆಟ್ಟಿಲಿನ ಮೇಲೆ ಕುಳಿತುಕೊಂಡ. ಮನದಲ್ಲಿ ದೇವತೆಯ ಅಪ್ಪಣೆ ಮೊಳಗುತಿತ್ತು....ಇದೇಕೋ ಸರಿಹೋಗಲಿಲ್ಲ. ಇಂದು ಇಲ್ಲಿಯೇ ಇದ್ದು ನಾಳೆ ಹೋಗುವ ಎಂದುಕೊಂಡು ಎದ್ದರೆ ಕಾಲುಗಳ ನೋವು ಅಡಗಿತು. ಎಂತಹ ಆಶ್ಚರ್ಯ.

ಗುಡಿಯಲ್ಲಿ ಬುತ್ತಿ ಬಿಚ್ಚಿದರೆ ಎರಡು ದಿನಗಳಿಗೆ ಆಗುವಷ್ಟಿದೆ ರೊಟ್ಟಿ, ಅದೂ ಆಶ್ಚರ್ಯವೆ! ಪಿಯೋರಿಗೆ ಅಂದೆಲ್ಲಾ ದೇವರನ್ನು ಪ್ರಾರ್ಥಿಸುವುದೇ ಹೊರತು ಮತ್ತೇನೂ ಇಲ್ಲ. ಮರುದಿನ ಹೊರಟರೆ ನಡಿಗೆ ಸರಾಗ. ಅರ್ಧ ದಾರಿ ಕಳೆದು

ನೋಡುತ್ತಾನೆ! ಭೂಕಂಪನದಿಂದ ಭೂಮಿ ಬಾಯಿ ಬಿಟ್ಟು ಅಲ್ಲಾಡಿ ಅಡಿಮೇಲಾಗಿದೆ, ಬೆಟ್ಟದ ತಳಭಾಗದವರೆಗೆ.

ಮಾಸುಕಿ ದೇವತೆ ನನ್ನನ್ನು ಹೋಗಗೊಡದಿದ್ದುದು ಇದಕ್ಕೇ ಅಲ್ಲವೇ? ತಾಯಿ ಅಂದರೆ ತಾಯಿ!

ಹುಡುಗ ಕಣ್ಣಿನ ಮೇಲೆ ಕಣ್ಣಿಟ್ಟು ಗಟ್ಟಿ ನೆಲದ ಮೇಲೆ ಕಾಲಿಡುತ್ತ ಬಹಳ ಕಷ್ಟದಿಂದ ಆ ತಾಣವನ್ನು ದಾಟಿ ಊರನ್ನು ಮುಟ್ಟಿದ. ತಾಯಿ ಬಾಗಿಲಲ್ಲಿಯೇ ಕಾದಿದ್ದಳು. ಸಕಾಲದಲ್ಲಿ ಮಗ ಮನೆಗೆ ಮರಳಲಿಲ್ಲವೆಂಬ ಭಯ ಮನದಲ್ಲಿ ತುಂಬಿಹೋಗಿತ್ತು. ಮಗನನ್ನು ಕಾಣುತ್ತಲೂ ಎರಡೂ ಕೈಗಳಿಂದ ಅಪ್ಪಿಕೊಂಡಳು.

ಹುಡುಗ ನಡೆದುದೆಲ್ಲವನ್ನೂ ತಿಳಿಸಿ ''ಅಮ್ಮಾ! ಮಾಸುಕಿ ದೇವತೆ ಸ್ವಪ್ನದಲ್ಲಿ ಕಾಣಿಸಿಕೊಳ್ಳದಿದ್ದರೆ ನಾನು ಬೆಟ್ಟ ಇಳಿದು ಭೂಕಂಪನಕ್ಕೆ ಸಿಕ್ಕಿ ಹೂತು ಹೋಗುತಿದ್ದೆ. ದೇವತೆ ಕಾಪಾಡಿದಳು'' ಎಂದು ಹೇಳಿದ.

ಮಾಸುಕಿ ತುಂಬಾ ಸತ್ಯ-ದಯೆಯುಳ್ಳ ದೇವತೆ. ನಾನು ಚಿಕ್ಕವಳಿದ್ದಾಗ ಒಮ್ಮೆ ಗುಡಿಗೆ ಹೋಗಿದ್ದೆ. ಆಗ ನನಗೆ ಸದಾ ರೋಗ ಕಾಡಿಸುತಿತ್ತು. ತಾಯಿ, ದೇವತೆಗೆ ಹರಕೆ ಹೊತ್ತು ನನ್ನನ್ನು ಕರೆದುಕೊಂಡು ಹೋಗಿದ್ದಳು. ನಾವು ಪ್ರಾರ್ಥನೆ ಸಲ್ಲಿಸಿ ಹಿಂದಿರುಗುವಾಗ ಒಂದು ದನಿ ಕೇಳಿಸಿತು.

'ಬಾಗಿಲ ಬಳಿ ದೊಣ್ಣೆ ಇದೆ ತೆಗೆದುಕೊಂಡು ಹೋಗು!'

ಆ ಮಾತು ಕೇಳಿ ತಿರುಗಿ ನೋಡಿದರೆ ಗುಡಿಯ ಬಾಗಿಲ ಬಳಿ ದೊಣ್ಣೆ! ನಾನು ಅದನ್ನು ತೆಗೆದುಕೊಂಡು ನಡೆದರೆ ಹಾದಿ ಎಷ್ಟು ಸರಾಗ ಗೊತ್ತೆ? ಹೋಗುವಾಗ ಅಮ್ಮನ ಕೈಯಾಸರೆ; ಬರುವಾಗ

ದೊಣ್ಣೆಯ ಆಸರೆ. ಆ ದೊಣ್ಣೆಯನ್ನು ಇನ್ನೂ ಇಟ್ಟಿರುವೆ. ನನ್ನ ಕೊರಡಿಯಲ್ಲಿರುವುದು ಅದೇ ದೊಣ್ಣೆ!'

ಹುಡುಗ ಆನಂದಿತನಾದ.

'ನನ್ನ ವಿದ್ಯೆ ಸರಾಗ ಹಿಡಿದರೆ ಸಾಕು.'

'ದೇವತೆ ಆಶೀರ್ವದಿಸಿದ್ದಾಳೆ. ಒಂದು ದಿನ ಇದ್ದು ಹೋಗಲು ಹೇಳಿದ್ದೇ ಸಾಕ್ಷಿ!'

ಪಿಯೋರಿ ಮುಂದೆ ಚೆನ್ನಾಗಿ ಓದಿ ವಿದ್ಯಾವಂತನಾದ.



# ಭಿಕ್ಷುಕ

ಭಿಕ್ಷುಕ ಕೈಯೊಡ್ಡಿ ಎಲ್ಲರನ್ನೂ ಬೇಡುತಿದ್ದ.

ಹಾದಿಯಲ್ಲಿ, ಬೀದಿಯಲ್ಲಿ, ನಾಲ್ಕು ಜನ ಕೂಡಿದೆಡೆಯಲ್ಲಿ ಅವನಿಗೆ ಭಿಕ್ಷೆ ಬೇಡುವುದೇ ಕೆಲಸ. ಅವನು ಮುದುಕನಲ್ಲ, ಹುಡುಗ. ಕುಂಟು-ಕುರುಡು-ರೋಗ ಯಾವುದೂ ಇರದ ಮನುಷ್ಯ. ಆದುದರಿಂದ ಅವನಿಗೆ ಯಾರೂ ಭಿಕ್ಷೆ ನೀಡಲಿಲ್ಲ. ಅವನು ಸುತ್ತಿ ಸುತ್ತಿ ಸಾಕಾಗಿ ಹಾದಿಯ ಬದಿಯಲ್ಲಿ ಕುಳಿತುಕೊಂಡ. ಹೊಟ್ಟೆ ಹಸಿಯುತಿತ್ತು. ಕೆಲಸ ಮಾಡಲಾರ. ಸೋಮಾರಿತನ ಹೊರತು ಮತ್ತೇನೂ ಅರಿಯ.

ಅವನಿಗೆ ಹತ್ತಿರದಲ್ಲೇ ಸಾಲುಗಟ್ಟಿ ಹರಿಯುತಿತ್ತು ಇರುವೆಗಳ ಸಾಲು. ಅವುಗಳನ್ನೇ ನೋಡುತಿದ್ದ ಭಿಕ್ಷುಕ. ಒಂದು ಇರುವೆಯಾದರೂ ಕ್ಷಣ ನಿಲ್ಲದು, ಅವುಗಳಿಗೆ ಇನ್ನೆಂತಹ ಕೆಲಸವೋ, ಹೋಗುತ್ತಿವೆ-ಬರುತ್ತಿವೆ. ಅವುಗಳ ಓಟವೇ ಓಟ. ಕೂಟವೇ ಕೂಟ. ಅವು ಹರಿದಾಡಿದ ತಾಣದಲ್ಲಿ ಗೆರೆ ಎಳೆದಂತೆ ಸಣ್ಣ ದಾರಿ ಮೂಡಿದೆ.

ಭಿಕ್ಷುಕ ನೋಡಿಯೇ ನೋಡಿದ. ಅವುಗಳ ಚಟುವಟಿಕೆಯನ್ನು ಗಮನಿಸಿದರೆ ಅವು ಹಸಿದಂತೆಯೇ ಇಲ್ಲ. ಒಂದೇ, ಎರಡೇ? ಕೋಟಿ ಕೋಟಿ ಇರುವೆಗಳು, ಅವುಗಳ ಸಾಲು ಕಿಂಚಿತ್ತಾದರೂ ಅತ್ತಿತ್ತಾದೀತೇ? ಶಿಸ್ತಿನ

ಸಿಪಾಯಿಗಳಂತೆ ನಡೆಯುವ ರೀತಿಯೂ ಬಲು ಚೆಂದ. ಎದುರು ಬದುರಾದ ನಡಿಗೆ. ಕೆಲವು ಮೊಟ್ಟೆಗಳನ್ನು ಹೊತ್ತಿವೆ. ಚುರುಕು ಎಂದರೆ ಎಂತಹ ಚುರುಕು? ಪಾದರಸವನ್ನು ಮೀರಿದ ಚುರುಕು.

ಭಿಕ್ಷುಕನ ಅಳುಮೋರೆಯನ್ನು ನೋಡಿದ ಇರುವೆ ಕೇಳಿತು ''ನೀನು ಏಕೆ ಸಪ್ಪೆಯಾಗಿದ್ದಿ? ನಿನಗೇನು ತೊಂದರೆ?''

''ನಾನು ಮೂರು ದಿನಗಳಿಂದ ಊಟ ಮಾಡಿಲ್ಲ.''

''ಅದೇಕೆ?''

''ಮನೆಯಲ್ಲಿ ಅಕ್ಕಿಯಿಲ್ಲ.''

''ನೀನ್ಯಾಕೆ ಸಂಪಾದಿಸಬಾರದು? ಕುಳಿತಲ್ಲಿಗೆ ಯಾರು ತಂದುಕೊಡುತ್ತಾರೆ? ಕೆಲಸ ಮಾಡದೆ ಎಲ್ಲಿಂದ ಊಟ ಬರುತ್ತದೆ? ನಾವೀಗ ಕೆಲಸ ಮಾಡುತ್ತಿಲ್ಲವೇ?''

''ನೀವು ಏನು ಕೆಲಸ ಮಾಡುತ್ತೀರಿ?''

''ಕಾಳು ಹೆಕ್ಕಿ ಕೂಡಿಡುವುದು ...ಬೆಚ್ಚನೆಯ ಮನೆಯನ್ನು ನಿರ್ಮಿಸುವುದು. ನಮ್ಮವರ ಯೋಗಕ್ಷೇಮ ನೋಡಿಕೊಳ್ಳುವುದು. ಹೀಗೆ, ಒಂದಲ್ಲ ಒಂದು ಕೆಲಸ ಇರುತ್ತದೆ.''

''ನನಗೆ ಕೆಲಸವೂ ಇಲ್ಲ ದುಡಿಮೆಯೂ ಇಲ್ಲ.''

''ಛಿ! ಛಿ! ಹೀಗೆಂದರಾದೀತೇ? ನಿನಗೆ ಕೆಲಸ ಮಾಡಲು ಯಾರದೇನು ಅಡ್ಡಿ?''

ಭಿಕ್ಷುಕ ಸ್ವಲ್ಪ ಹೊತ್ತು ಸುಮ್ಮನಿದ್ದು ''ಯಾರ ಅಡ್ಡಿಯೂ ಇಲ್ಲ'' ಎಂದ, ಬಾಡಿದ ಮುಖದಿಂದ.

''ಮತ್ತೇಕೆ ಕೆಲಸ ಮಾಡಲಾರೆ?''

''ಕೆಲಸ ಇದ್ದರಷ್ಟೆ ಮಾಡುವುದು?''

''ಯಾವ ಕೆಲಸವೂ ನಿನ್ನನ್ನು ಹುಡುಕಿಕೊಂಡು ಬರುವುದಿಲ್ಲ. ನೀನೇ ಹುಡುಕಿಕೊಂಡು ಮಾಡಬೇಕು. ನಮಗೆ ಯಾರೂ ಕರೆದು ಕೆಲಸ ಕೊಡುವುದಿಲ್ಲ. ನಾವೇ ಹುಡುಕಿಕೊಳ್ಳುತ್ತೇವೆ.''

''ಅಂದರೆ....''

''ಕಾಳು ಹುಡುಕಿಕೊಂಡು ಹೋಗುತ್ತೇವೆ.''

ಭಿಕ್ಷುಕ ತನ್ನಲ್ಲೇ ಯೋಚಿಸಿದ. ಇರುವೆ ಹೇಳಿದುದರಲ್ಲಿ ಎಷ್ಟು ಸತ್ಯವಿದೆ....ಸನ್ನಂತೆಯೇ ಅವು ಕುಳಿತಿರುವುದಾದರೆ ಕಾಳೆಲ್ಲಿ ದಕ್ಕುತಿತ್ತು?

ಮತ್ತೆ ಇರುವೆ ಎಂದಿತು ''ಅಯ್ಯಾ ನಮಸ್ಕಾರ! ನಾನು ಹೋಗಿ ಬರುತ್ತೇನೆ.''

''ಆ ಇರುವೆ ಕೂಡಲೇ ಸಾಲಿನಲ್ಲಿ ಕೂಡಿಕೊಂಡು ಹೊರಟುಹೋಯಿತು.

ಭಿಕ್ಷುಕ ಎದ್ದು ನಿಂತ. ತೀವ್ರ ಹಸಿವೆಯಿಂದ ಕಾಲುಗಳು ನಡುಗುತಿದ್ದುವು. ಇನ್ನು ದೂರ ನಡೆಯುವುದು ಹೇಗೆ? ಎಂಬ ಯೋಚನೆ ಮನದಲ್ಲಿ.

ಮೇಲೆ ಸುಡು ಬಿಸಿಲು; ಕೆಳಗೆ ಕಾದ ನೆಲ; ಅದಕ್ಕಿಂತ ಹೆಚ್ಚಿನದು ಹೊಟ್ಟೆ ಹಸಿವು.

ಭಿಕ್ಷುಕ ಎದ್ದು ಹೊರಟ. ನೆಲ ಕಾದಿದ್ದುದರಿಂದ ಬೇಗಬೇಗನೆ ಹೆಜ್ಜೆ ತೆಗೆಯಲೇಬೇಕು. ಹಾದಿ ಬೇಗಬೇಗ ಕಳೆಯಿತು. ದೂರದಲ್ಲಿ ರಸ್ತೆ ಕೆಲಸ ನಡೆಯುತಿತ್ತು. ಬಹಳ ಮಂದಿ ಕೆಲಸಗಾರರು ಕೂಡಿದ್ದಾರೆ. ಅವರೊಂದಿಗೆ

ಕೂಡಿಕೊಂಡು ಕೆಲಸ ಹಿಡಿದ ಭಿಕ್ಷುಕ. ಅನಂತರ ಅವನ ಊಟ ಬಟ್ಟೆಗಳಿಗೆ ಕೊರತೆ ಬರಲಿಲ್ಲ. ಚೆನ್ನಾಗಿ ದುಡಿದು ಹೊಟ್ಟೆ ತುಂಬಾ ಊಟ ಮಾಡಿ ಸುಖವಾಗಿದ್ದ.

ದಿನದಿನದ ರೊಟ್ಟಿಗಾಗಿ
ಮೈಮುಚ್ಚುವ ಬಟ್ಟೆಗಾಗಿ
ವಾಸಿಸುವ ವಸತಿಗಾಗಿ
ಎಲ್ಲರೂ ನಿತ್ಯ ಹದವರಿತು
ಸಂಜೀವನ ಕ್ರಮವರಿತು
ಕೈತುಂಬ ದುಡಿಯಲೇಬೇಕು.



# ದಾಲಿ-ರಾಣಿ

ದಾಲಿ ಬಲು ಮುದ್ದು ನಾಯಿ.

ಅದು ಮುದ್ದು ನಾಯಿ ಮಾತ್ರವೇ? ತುಂಬ ಬುದ್ಧಿವಂತ ನಾಯಿ ಕೂಡ. ದಾಲಿ ಎಂದರೆ ಮನೆ ಮಂದಿಗೆಲ್ಲಾ ಅಚ್ಚುಮೆಚ್ಚು. ಅದರ ಮೈ ಬಣ್ಣ ಅಚ್ಚ ಬಿಳುಪು. ದಾಲಿಗೂ ಮನೆಯ ಮಗು-ರಾಣಿಗೂ ಒಳ್ಳೆಯ ಸ್ನೇಹ. ನಾಲ್ಕು ವರ್ಷದ ಮಗುವನ್ನು ಹಗಲೆಲ್ಲಾ ಚೆನ್ನಾಗಿ ನೋಡಿಕೊಳ್ಳುತಿತ್ತು ದಾಲಿ.

ತಂದೆ-ತಾಯಿಯರು ತೋಟದ ಕಡೆ ಹೋದರೆ ರಾಣಿಗೆ ಸಹಪಾಟಿ ದಾಲಿ. ಊಟ ತಿಂಡಿ ಆಟ ಎಲ್ಲಾ ಅದರೊಂದಿಗೇ. ಮನೆಯಲ್ಲಿ, ಅಂಗಳದಲ್ಲಿ, ಬಯಲಲ್ಲಿ, ಗದ್ದೆಯಲ್ಲಿ ಮಗುವಿಗೆ ದಾಲಿಯೇ ಕಾವಲು. ರಾಣಿ-ದಾಲಿಯರ ಕೂಟವೇ ಕೂಟ. ಆಟವೇ ಆಟ. ನಾಯಿ ಸದಾ ಕಾವಲಿರುವುದರಿಂದ ತಂದೆ ತಾಯಿಗಳು ನಿರಾತಂಕವಾಗಿ ತಮ್ಮ ಕೆಲಸ ತಾವು ಮಾಡಿಕೊಳ್ಳುತ್ತಾರೆ. ಮಗುವಿಗೂ ಅಷ್ಟೆ; ತನ್ನೊಂದಿಗೆ ದಾಲಿಯಿದ್ದರೆ ಸಾಕು; ಇನ್ನಾರೂ ಬೇಕಿಲ್ಲ.

ಮನೆಯ ಬಲ ಮಗ್ಗುಲಿಗೆ ಗದ್ದೆ-ತೋಟ. ಒಮ್ಮೊಮ್ಮೆ ತಂದೆ ತಾಯಿ ಕೆಲಸ ಮಾಡುವಲ್ಲಿಗೆ ದಾಲಿಯೊಂದಿಗೆ ಹೋಗಿ ಬರುತ್ತಾಳೆ ರಾಣಿ. ಮನೆಯ ಎಡ ಮಗ್ಗುಲಿಗೆ ದೊಡ್ಡ ಬಯಲು. ಅದರಲ್ಲಿ ರೈಲಿನ ಹಳಿ ಹಾದು ಹೋಗಿದೆ. ದಿನಕ್ಕೆರಡು ಬಾರಿ ರೈಲು ಜುಕ್ ಜುಕ್ ಕ್ಹೂ! ಎಂದು ಬರುತಿದ್ದರೆ

ಚಪ್ಪಾಳೆ ತಟ್ಟಿ ನಗುತ್ತಾಳೆ ರಾಣಿ.

ಜುಕ್ ಜುಕ್ ಕ್ಹೂ! ಎಂದು ಪುಟ್ಟ ದನಿಯಲ್ಲಿ ಅವಳು ರಾಗ ಮಾಡಿದರೆ ದಾಲಿ ತನ್ನ ದನಿಯನ್ನು ಆದಷ್ಟು ನವರುಗೊಳಿಸಿ ಬೌವ್ವೂವೂವೂ! ಎಂದು ಮರುದನಿಗೊಡುತ್ತದೆ. ರಾಣಿ ರೈಲಿನ ಸದ್ದು ಕೇಳಿಸುತ್ತಲೂ ಅಂಗಳಕ್ಕೆ ಧಾವಿಸಿ ಬಂದರೆ ದಾಲಿ ಹಿಂಬಾಲಿಸಿ ಬಂದು ಬಳಿಯಲ್ಲಿ ನಿಲ್ಲುತ್ತದೆ. ಇಬ್ಬರೂ ರೈಲು ಹಾವು ಹೋಗುವವರೆಗೂ ನಿಂತು ನೋಡುತ್ತಾರೆ.

ಅಂದು, ರಾಣಿ ಪುಟ್ಟ ಪುಟ್ಟ ಹೆಜ್ಜೆಯಿಡುತ್ತ ಎಡ ಮಗ್ಗುಲಿನ ಬಯಲ ಕಡೆ ನಡೆದಳು. ದಾಲಿ ಹಿಂಬಾಲಿಸಿತು. ಮಗು ರೈಲಿನ ಹಾದಿಯ ಕಡೆ ನಗುತ್ತ ನಡೆಯುತಿದ್ದರೆ ದಾಲಿ ಜೂಜು ಕಟ್ಟಿದಂತೆ ಅದನ್ನು ಹಿಂದೆ ಹಾಕಿ ಮುಂದೋಡಿ ಮಗು ಬರುವವರೆಗೆ ನಿಲ್ಲುತಿತ್ತು. ರಾಣಿಗೆ ಮುಂದೋಡುವ ಆಟ. ದಾಲಿಗೆ ಜೂಜು ಕಟ್ಟುವ ಆಟ. ರಾಣಿ ರೈಲಿನ ಹಳಿಯ ಮೇಲೆ ಕುಳಿತು ಚಪ್ಪಾಳೆ ತಟ್ಟಿದಳು. ದಾಲಿ ಅವಳ ಮೈಗೊತ್ತಿ ಕುಳಿತು ಬೌವ್ವೂವೂ! ಎಂದಿತು.

ತೋಟದಿಂದ ಹಿಂದಿರುಗಿದ ತಂದೆ ತಾಯಿ ನೋಡುತ್ತಾರೆ ಮನೆಯಲ್ಲಿ ರಾಣಿ-ದಾಲಿ ಇಲ್ಲವೇ ಇಲ್ಲ. ಮನೆಯ ಸುತ್ತಮುತ್ತ ನೋಡಿದರೂ ಕಾಣಿಸಲಿಲ್ಲ. ಮುಂಬಾಗಿಲಲ್ಲಿ ನಿಂತು ರಾಣೀ-ದಾಲೀ ಎಂದು ಗಟ್ಟಿಯಾಗಿ ಕೂಗಿದರು. ಆ ದನಿಗೆ ಉತ್ತರವಾಗಿ ದಾಲಿ ದೊಡ್ಡ ದನಿಯಲ್ಲಿ ಬೊಗಳಿ ತನ್ನ ಇರುವನ್ನು ತಿಳಿಸಿಕೊಟ್ಟಿತು.

ಗಂಟೆ ಹನ್ನೆರಡು! ಇನ್ನೇನು ರೈಲು ಬರುವ ಹೊತ್ತು! ಇಬ್ಬರೂ ಅತ್ತ ಧಾವಿಸುವುದರೊಳಗಾಗಿ ರೈಲು ಬಂದೇ

ಬಿಟ್ಟಿತು. ಮಗು ಹಳಿಯ ಮೇಲೆ ಕಿಲಕಿಲ ನಗುತ್ತ ಕುಳಿತಿದೆ! ಇಂದು ರಾಣಿಯ ಗತಿ ಮುಗಿಯಿತು ಎಂದು ಗಡಗಡ ನಡುಗಿದರು ತಂದೆ, ತಾಯಿ.

"ರಾಣೀ, ರಾಣೀ! ಓಡಿ ಬಾ ರೈಲು ಬಂತು ರೈಲು!! ದಾಲೀ ಏನು ಮಾಡಿಬಿಟ್ಟೆ?"

ಬೌವ್ವೂವೂವೂ!

ಬೌವ್ವೂವೂವೂ!

"ಅಯ್ಯೋ? ದೇವರೇ! ಏನು ಗತಿ?" ಚೀರಿದಳು ತಾಯಿ.

ಇವರಿಗೂ ಮಗುವಿಗೂ ಇರುವ ಅಂತರವನ್ನು ನೋಡಿದರೆ ತಾವು ಸ್ಥಳವನ್ನು ಮುಟ್ಟುವುದರೊಳಗಾಗಿ ರೈಲು ಹಾದು ಹೋಗುವುದು ಖಂಡಿತ.

"ರಾಣೀ! ರಾಣೀ!!"

"ರಾಣೀ! ಓಡಿ ಬಾ!!"

ತಾಯಿ, ತಂದೆ ಒಂದೇ ಸಮನೆ ಕೂಗುತ್ತ ದೌಡಾಯಿಸಿ ಬರುತಿದ್ದಾರೆ.

ಆ ಕ್ಷಣವೇ ದಾಲಿಗೆ ವಿಷಯವೇನೆಂಬುದು ಅರ್ಥವಾಯಿತು. ಕೂಡಲೇ ಅದು ಮಗುವಿನ ಅಂಗಿಯ ಮೇಲೆ ಹಿಡಿದು ಬಲವಾಗಿ ಹೊರಗೆಳೆಯಿತು. ಮಗು ಕೆಳಗೆ ಬಿದ್ದು ಪೆಚ್ಚಾಗಿ ಅಳುತಿದ್ದರೂ ಬಿಡದೆ ಬಿದ್ದಲ್ಲಿಂದ ಮತ್ತೆ ಎಳೆದುಕೊಂಡಿತು.

ಮಗು ಹಳಿಯ ಆಚೆಕಡೆ ಬಿದ್ದಿದ್ದರೂ ಬಿಡದೆ ನಾಯಿ ಇನ್ನೂ ಅತ್ತತ್ತ ಎಳೆದುಕೊಂಡಾಗಲೆ ರೈಲು ಜುಗ್ ಜುಗ್ ಕ್ಕೂ! ಎನ್ನುತ್ತ ರಭಸದಿಂದ ಹರಿದು ಹೋಯಿತು.

ಈಚೆಕಡೆ ತಾಯಿ, ತಂದೆ, ಮಧ್ಯೆ ರೈಲು. ಆಚೆಕಡೆ ದಾಲಿ ಮತ್ತು ರಾಣಿ!

ರೈಲು ಆ ಕ್ಷಣದಿಂದ ಹರಿದು ಹೋಗುವವರೆಗೂ ಜೀವ ಬಿಗಿ ಹಿಡಿದು ನಿಂತಿದ್ದ ತಂದೆ ತಾಯಿ ಆ ಕೂಡಲೇ ರೈಲು ಹಳಿಯನ್ನು ದಾಟಿ ಮಗುವಿನೆಡೆಗೆ ಧಾವಿಸಿದರು.

ಕೆಳಗೆ ಬಿದ್ದ ಮಗು ಎದ್ದು ಕುಳಿತು ರೈಲಿನ ರಭಸದ ಓಟವನ್ನು ಅರಳುಗಣ್ಣುಗಳಿಂದ ನೋಡುತಿತ್ತು. ದಾಲಿ ಅದರ ತೊಡೆಗಳ ಮೇಲೆ ಎರಡೂ ಮುಂಗಾಲುಗಳನ್ನಿಟ್ಟು ಅದುಮಿ ಹಿಡಿಯುವಂತೆ ತನ್ನ ತಲೆಯನ್ನು ಮಗುವಿನ ಎದೆಗಾಂತು ಕುಳಿತಿದೆ!

ತಂದೆ, ತಾಯಿಯರಿಗೆ ನಾಯಿಯನ್ನು ಮುದ್ದಿಸಬೇಕೋ ಮಗುವನ್ನು ಮುದ್ದಿಸಬೇಕೋ ಎಂಬಂತಹ ಪರಿಸ್ಥಿತಿ.

ಇಬ್ಬರನ್ನೂ ಒಂದೇ ಬಾರಿಗೆ ಅಪ್ಪಿ ಮುದ್ದಾಡಿದರು.

ಮಗುವಿನ ಪ್ರಾಣ ಉಳಿಸಿದ ಮೂಕಪ್ರಾಣಿ ಕುಂಯಿಯಿಯಿಯೀ ಎಂದು ತನ್ನ ಮಹದಾನಂದವನ್ನು ಬಾಯಿ ತುಂಬಾ ವ್ಯಕ್ತಪಡಿಸಿತು.

ಅವಕಾಶಕ್ಕಾಗಿ ಕಾದಿರುವುದು ತಪ್ಪು.
ಬುದ್ಧಿಮತ್ತೆಯು ಅವಕಾಶವನ್ನು ತನ್ನ
ಗುಲಾಮನನ್ನು ಮಾಡಿಕೊಳ್ಳುತ್ತದೆ.

ಕಷ್ಟನಷ್ಟಗಳನ್ನು ಅನುಭವಿಸದೆಯೆ
ಜಗತ್ತಿನಲ್ಲಿ ಯಾವುದೊಂದು ಒಳ್ಳೆಯ
ಕೆಲಸವನ್ನು ಮಾಡಲು ಸಾಧ್ಯವಾಗಿಲ್ಲ.



# ಸಿಸಿಲಿ

ಗ್ರೀಕ್ ದೇಶದಲ್ಲಿ ಸಿಸಿಲಿ ಎಂಬ ಯುದ್ಧ ವೀರನಿದ್ದ. ಅವನು ಮಹಾ ಬಲಶಾಲಿ. ಎತ್ತರವಾದ ಆಳು, ತಿರುಪಿದ ಉದ್ದನೆಯ ಮೀಸೆ, ಕೆಂಡದುಂಡೆಯಂತಹ ಕಣ್ಣುಗಳು, ನಡೆದರೆ ದಿಮ್ ದಿಮ್ ಎನ್ನುವ ಸದ್ದು, ಕೋಪ-ರೋಷಗಳ ಗಣಿ.

ಸಿಸಿಲಿ ನೆರೆ ಪ್ರಾಂತ್ಯಗಳಿಗೆ ಆಗಾಗ ಹೋಗಿಬರುತಿದ್ದ. ಯಾರಾದರೂ ಸ್ವಲ್ಪ ವಿರೋಧ ತೋರಿದರೆ ಸಾಕು, ಅವರನ್ನು ಒಂದೇ ಏಟಿಗೆ ಮುಗಿಸುತಿದ್ದ. ಜನ ಹೆದರಿ ಹೈರಾಣಾದರೆ ಸಿಸಿಲಿಗೆ ಇನ್ನಷ್ಟು ಹುರುಪು. ಅವರ ಕೈಕಾಲುಗಳನ್ನು ಕಡ್ಡಿ ಮುರಿದಂತೆ ಲಟಲಟನೆ ಮುರಿದು ಕೂರಿಸುತಿದ್ದ. ಯಾವೊಂದು ಯುದ್ಧಕ್ಕೂ ಅವನು ಮುಂದೆ. ಜಯ ಅವನಿಗೆ ಕಟ್ಟಿಟ್ಟ ಬುತ್ತಿ. ಆದ್ದರಿಂದ ಅವನ ಹೆಸರು ಕೇಳಿದರೇ ನಡುಗುತಿದ್ದರು ಜನ.

ಸಿಸಿಲಿ ಒಮ್ಮೆ ಸ್ವಿಟ್ಜರ್‌ಲೆಂಡ್ ಪ್ರಾಂತ್ಯಕ್ಕೆ ಹೋದ. ಆ ಪ್ರದೇಶವೆಲ್ಲಾ ಸುತ್ತಾಡಿದ. ಮುಗ್ಧ ಸ್ವಭಾವದ ಜನ ಅವನಿಗೆ ವಿರೋಧ ತೋರಿಸಲಿಲ್ಲ. ಸಿಸಿಲಿಯ ಹುರುಪಿಗೆ ಏನೇನೂ ಚೋದನೆ ದೊರಕದೆ ಆ ದೇಶ ಸಪ್ಪೆ ಎನಿಸಿತು. ಅವನು ಆಲ್ಪ್ಸ ಪರ್ವತಗಳ ಕಡೆ ಹೋದ. ಅಲ್ಲೊಬ್ಬ ಸಾಧು ಕಣ್ಣಿಗೆ ಬಿದ್ದ. ಅವನು ಉದ್ದನೆಯ ಕಾವಿ ಬಣ್ಣದ ಅಂಗಿ ಧರಿಸಿದ್ದ. ಅವನನ್ನು

ನೋಡಿದೊಡನೆಯೇ ಇದೇನೋ ವಿಚಿತ್ರ ಎನಿಸಿತು ಸಿಸಿಲಿಗೆ.

''ಏನಯ್ಯಾ ಈ ವಿಚಿತ್ರ?'' ಎಂದು ಕೇಳಿದ ಸಿಸಿಲಿ.

''ಅಂದರೆ....?''

''ನಿನ್ನ ವೇಷ ಕುರಿತು ಕೇಳಿದ್ದು.''

''ನಾನು ಸನ್ಯಾಸಿ.''

''ನೀನು ಎಲ್ಲಿಂದ ಬಂದಿದ್ದಿ?''

''ಭಾರತದಿಂದ.''

''ನೀನು ಇಲ್ಲಿಗೆ ಬಂದ ಉದ್ದೇಶವೇನು?''

''ನಾನು ಶಾಂತಿದೂತ. ನೀನು ಯುದ್ಧ ವೀರ ಹೇಗೋ ಹಾಗೆಯೇ.''

''ನಾನು ಯುದ್ಧ ವೀರನಾಗಿ ರಾಷ್ಟ್ರವನ್ನು ಕಟ್ಟುವೆ. ನೀನು ಶಾಂತಿದೂತನಾಗಿ ಏನು ಮಾಡುವೆ?''

''ಬಾಳಿನ ಕಷ್ಟವನ್ನು ದೂರ ಮಾಡುವಂತಹ ಶಾಂತಿಯನ್ನು ನಾನು ಮನೆಮನೆಗೆ ಒಯ್ಯುವೆ.''

''ಅಂದರೆ....?''

''ಶಾಂತಿಯಿಂದ ಯಾರೊಬ್ಬರೂ ಸುಖವಾಗಿ ಬಾಳಬಹುದು. ಆದ್ದರಿಂದ ಯುದ್ಧದ ಸಾವು-ನೋವುಗಳಿಗಿಂತ ಶಾಂತಿ ಎಲ್ಲರಿಗೂ ಒಳ್ಳೆಯದು.''

ಸಿಸಿಲಿ ಸ್ವಲ್ಪ ಹೊತ್ತು ತನ್ನೊಳಗೇ ಯೋಚಿಸಿದ. ತನ್ನ ವೀರತನ ಅವನ ಶಾಂತಿಯ ಮುಂದೆ ತೀರಾ ಸಣ್ಣದಾಗಿ ತೋರಿತು. ಸ್ವಲ್ಪ ಹೊತ್ತು ಬಾಯಿಯಿಂದ ಮಾತು ಹೊರಡಲೇ ಇಲ್ಲ.

ಸಂನ್ಯಾಸಿ ಸಮಾಧಾನದಿಂದ ನುಡಿದ ''ವೀರನೇ? ನಿನ್ನ ಶೌರ್ಯ-ಸಾಹಸಗಳನ್ನು ಶಾಂತಿಸ್ಥಾಪನೆಗಾಗಿ ವಿನಿಯೋಗಿಸಿದರೆ ಇಡೀ ದೇಶದ ಜನರು ಸುಖಜೀವನ ನಡೆಸುವುದು ಖಂಡಿತ ಸಾಧ್ಯ. ನೀನು ಇದನ್ನು ಮನಗಾಣಬೇಕು. ನಿನ್ನಿಂದ ದೇಶ ಶಾಂತಿ-ಜೀವನಶಾಂತಿ ಲಭಿಸಿ ಎಲ್ಲರೂ ಸುಖವಾಗಿರುವಂತಾಗಲು ನೀನು ಶ್ರಮಿಸು. ಅದರಿಂದ ನಿನಗೆ ತುಂಬ ಒಳ್ಳೆಯದುಂಟು. ಲೋಕಕ್ಕೂ ಕ್ಷೇಮ. ಅಷ್ಟೇ ಅಲ್ಲ, ನಿನಗೆ ಕೀರ್ತಿ ಗೌರವಗಳೂ ಬರುತ್ತವೆ.''

ಸಿಸಿಲಿ ಸಂನ್ಯಾಸಿಯ ಒಳ್ಳೆಯ ಮಾತುಗಳನ್ನು ಕೇಳಿ ಸಂತಸಗೊಂಡ. ತನ್ನ ಯುದ್ಧ ವೀರತನ ತೀರ ಕೀಳಾಗಿ ತೋರಿತು. ಸಾಯುವವರ ಅಳು-ಗೋಳು-ನೋವು ಮನವನ್ನು ಸೂಜಿಯಂತೆ ಚುಚ್ಚಿದುವು. ತಾನು ತುಂಬ ತಪ್ಪು ಮಾಡಿರುವೆ ಎಂಬುದು ತಿಳಿಯಿತು. ಸಿಸಿಲಿ ಸೋತು ಹೋದಂತೆ ಹೇಳಿದ ''ಅಯ್ಯಾ ತಮ್ಮಾ! ನಿನ್ನ ಉಪದೇಶ ನಿಜವಾಗಿ ನನಗೆ ಸಂತೋಷ ತಂದಿದೆ. ಈಗೀಗ ನನ್ನ ಬಲ ಬಿಸಿಲಟ್ಟಿದ ಮಂಜಿನಂತೆ ಕರಗಿ ಹೋಗುತ್ತಿದೆ. ನಾನು ಮನುಷ್ಯನಾಗಿ ಹುಟ್ಟಿ ಮನುಷ್ಯರಿಗೆ ಕೊಟ್ಟ ತೊಂದರೆಯನ್ನು ನೆನೆದು ಈಗ ದುಃಖ ಅನುಭವಿಸುತ್ತಿರುವೆ. ಯುದ್ಧಭಯಕ್ಕಿಂತ ಶಾಂತಿ ಸುಖ ಬಹಳ ಒಳ್ಳೆಯದು ಮತ್ತು ಸತ್ಯ ಸುಂದರ ಎಂಬುದನ್ನು ನೀನು ತೋರಿಸಿಕೊಟ್ಟಿರುವೆ. ಇಂದೇ ನನ್ನ ಆಯುಧಗಳನ್ನು ಒಗೆದು ಶಾಂತ ಜೀವನಕ್ಕೆ ಶರಣಾಗುವೆ. ನಿನ್ನ ಉಪದೇಶವನ್ನು ಎಂದಿಗೂ ಮರೆಯಲಾರೆ.''

ಆಗ ಇಬ್ಬರೂ ಸಂತಸದಿಂದ ಒಬ್ಬರಿಗೊಬ್ಬರು ತಬ್ಬಿ ಆಲಿಂಗನ ಮಾಡಿಕೊಂಡರು.

ಬರೆಯಲಿಕ್ಕೆ ಬಾರದವರು
ಕಲಿಯಲಿಕ್ಕೆ ಇಚ್ಛೆ ಇಲ್ಲದವರು
ಜೀವನವನ್ನು ಅರ್ಥ ಮಾಡಿ
ಕೊಳ್ಳುವುದು ಸಾಧ್ಯವಿಲ್ಲ.



## ಪರಮಾನ್ನ

ಮುತ್ತು ಬಿಳಿಯ ಬೆಕ್ಕು. ಕುಚ್ಚು ಬಾಲದ ಅದರ ಮೈ ಅರಳೆಯಷ್ಟು ಮೃದು.

ಆಗಾಗ ಮನೆಯ ಒಡತಿ ಪಾಯಸ ಮಾಡುವುದನ್ನು ಕಣ್ಣಿಟ್ಟು ನೋಡುತಿತ್ತು ಮುತ್ತು. ಪರಮಾನ್ನ ಎಂದರೆ ಬಹಳ ಇಷ್ಟ. ಅವಳು ಮಾಡಿದಾಗಲೆಲ್ಲಾ ಅದಕ್ಕೊಂದು ಬಟ್ಟಲು ಕೊಡುತಿದ್ದಳು. ಅದು ಹೊಟ್ಟೆ ತುಂಬಾ ತಿಂದು ಬಾಯಿ ಚಪ್ಪರಿಸುತಿತ್ತು.

ಒಮ್ಮೆ ಒಡತಿ ಹೊರಹೋಗಿದ್ದಾಳೆ. ಮುತ್ತು ಒಲೆಯ ಬಳಿ ಬೆಚ್ಚಗೆ ಕುಳಿತಿದೆ. ಕಿಟಕಿಯಲ್ಲಿ ನುಗ್ಗಿ ಗೆಳೆಯ ಒಳ ಬಂದ. ಬಿಳಿಯ ಕಣ್ಣಿನ ಕರಿಯ ಬೆಕ್ಕು ಅಲ್ಲಿಂದಲೇ ಕರೆಯಿತು.

''ಮಿಯಾವ್! ಮಿಯಾವ್!''

ಮುತ್ತು ಖುಷಿಯಿಂದ ಸ್ವಾಗತಿಸಿತು ''ಮಿಯಾವ್! ಮಿಯಾವ್!''

''ಮನೆಯೊಡತಿ ಇಲ್ಲವೋ?''

''ಇಲ್ಲ. ಹೊರಹೋಗಿದ್ದಾಳೆ.''

''ಹಾಂ! ನನಗೀಗ ತುಂಬಾ ಹಸಿವು. ಏನು ಕೊಡುತ್ತಿ?''

''ಹಾಲಿದೆ, ಕೊಡಲೇ?''

''ದಿನವೂ ಹಾಲು ಕುಡಿದು ಬೇಸರವಾಗಿದೆ.''

''ಮತ್ತೇನು ಕೊಡಲಿ?''

''ಏನಾದರೂ ಮಾಡಿಕೊಡು.''

''ಪರಮಾನ್ನ ಮಾಡಿಕೊಡಲೇ?''

''ಹಾಂ! ಅದು ಒಳ್ಳೆಯದು.''

''ಸರಿ.''

ಮುತ್ತು ಹಾಲು ಒಲೆಯ ಮೇಲಿಟ್ಟು ರವೆ ಸುರಿದು ತಿರುಗಿಸಿತು. ರವೆ ಹೆಚ್ಚಾಗಿ ದೊಡ್ಡ ಮುದ್ದೆಯಾಯಿತು. ಸೌಟಿನಿಂದ ಕೆದಕುತಿದ್ದರೂ ಕರಗಲಿಲ್ಲ ರವೆ. ಮುತ್ತು ಇನ್ನಿಷ್ಟು ಹಾಲು ಸುರಿಯಿತು. ಗೆಳೆಯ ನೋಡುತ್ತಲೇ ಇದ್ದಾನೆ. ಬಾಯಿಯಲ್ಲಿ ನೀರಾಡುತ್ತಲೇ ಇದೆ. ಪರಮಾನ್ನ ಎಂದಿಗೆ ತಯಾರಾದೀತೋ ಎಂಬ ಆತುರದಿಂದ ಕೇಳಿದ ''ಮಿಯಾವ್! ಮಿಯಾವ್! ಇನ್ನೂ ಆಗಲಿಲ್ಲವೇ ಮುತ್ತು? ನನಗೆ ತಾಳಲಾಗುತ್ತಿಲ್ಲ, ಬಾಯಿಯಲ್ಲಿ ನೀರೂರುತ್ತಿದೆ.''

''ತಾಳು ಸಕ್ಕರೆ ಹಾಕುವೆ.''

ಸಕ್ಕರೆಯ ಶೀಶೆಯನ್ನು ತಂದು ಸುರಿದು ಕೆದಕತೊಡಗಿತು ಮುತ್ತು.

''ಒಲೆಯಿಂದ ಇಳಿಸು. ಬೇಗ ತಣ್ಣಗಾಗಲಿ'' ಎಂದ ಗೆಳೆಯ.

''ನಿನಗಂತೂ ಬಹಳ ಆತುರ.''

''ಬೆಳಗಿನಿಂದ ಏನೂ ತಿಂದಿಲ್ಲ. ತುಂಬ ಹಸಿವು.''

ಬಾಗಿಲು ತೆರೆದ ಸದ್ದು ಕೇಳಿ ಎರಡರ ಕಣ್ಣುಗಳೂ ಅತ್ತ ಹೊರಳಿದುವು. ಯಜಮಾನಿ ಒಳಹೆಜ್ಜೆಯಿಟ್ಟಳು.

ಅವಳು ಬೆಕ್ಕುಗಳ ದರ್ಬಾರ್ ನೋಡಿ ಸೌಟಿನಿಂದ ಎರಡಕ್ಕೂ ಒಂದೊಂದು ಬಾರಿಸಿದಳು.

ಮುತ್ತು ಗೆಳೆಯನೊಂದಿಗೆ ಚಂಗನೆ ನೆಗೆದು ಓಡಿ ಹೋಯಿತು.

ವಿಳಂಬ ಮನೋಭಾವ
ವಿನಾಶಕ್ಕೆ ಸರಿದಾರಿ.

ಮಾನವೀಯ ಮೌಲ್ಯ ಮಾಪನ
ಆರ್ಥಿಕ ಸಮೃದ್ಧಿಯಿಂದಲ್ಲವೋ
ಬೌದ್ಧಿಕ-ಚಾರಿತ್ರಿಕ-ಸಿರಿತನದಿಂದ



# ರಾಮಿ-ಸೋಮಿ

ರಾಮಿ-ಸೋಮಿ ಪುಟ್ಟ ಪುಟ್ಟ ಹುಡುಗಿಯರು.

ದಿನವೆಲ್ಲಾ ಆಟ-ಊಟ-ನಿದ್ರೆ, ಇಷ್ಟೆ. ಶಾಲೆ ಎಂದರೆ ಅಳು....ಅಳುವ ಗೋಳು.

ತಂದೆ ತಾಯಿಗೆ ಅವರನ್ನು ತಿದ್ದಿ ಸರಿಪಡಿಸುವುದು ಸಾಧ್ಯವಾಗದೆ ಸುಮ್ಮನಿದ್ದರು. ಮಕ್ಕಳು ದಿನವೂ ಮಣ್ಣಾಡುವುದರಲ್ಲಿ ಹಾದಿ-ಬೀದಿ ಸುತ್ತುವುದರಲ್ಲಿ ಹೊತ್ತು ಕಳೆದು ಮನೆ ಸೇರುತಿದ್ದುದು ಸಂಜೆಗೆ. ತಾಯಿ ತಂದೆ ಕೂಲಿ ಕೆಲಸ ಮುಗಿಸಿ. ಊಟ ಹಾಕಿದರೆ ಮುಗಿಯಿತು ಮಕ್ಕಳಿಗೆ ಸೊಗಸಾದ ನಿದ್ದೆ.

ಮಕ್ಕಳ ಕೊಳಕನ್ನು ನೋಡಿದರೆ ಇತರರಿಗೆ ಅಸಹ್ಯ. ಮಕ್ಕಳಿಗೆ ಮಾತ್ರ ಅದು ಅರ್ಥವಾಗಿರಲಿಲ್ಲ. ಅವರ ಚೆಲ್ಲಾಟವೇ ಆಟ. ಕೇರಿಯ ಮಕ್ಕಳು ಶಾಲೆಗೆ ಹೋಗುವುದರಿಂದ ಇವರ ಚೆಲ್ಲಾಟಕ್ಕೆ ಜೊತೆಗಾರರಿಲ್ಲ. ಯಾವುದೋ ಕರಿ ನಾಯಿ ನಿದ್ದೆ ಮಾಡಿತ್ತು ಅಂಗಳದಲ್ಲಿ. ಅದಕ್ಕೆ ಇಬ್ಬರೂ ಕೂಡಿ ಕೀಟಲೆ ಆರಂಭಿಸಿನರು. ಅದು ತಾಳುವಷ್ಟು ತಾಳಿದ ನಂತರ ಕೋಪದಿಂದ ಬೊಗಳಿ ಮೇಲೆರಗಿತು. ಆಗ ಮಕ್ಕಳಿಗಾದ ಭಯ ಅಷ್ಟಿಷ್ಟಲ್ಲ. ಹೆದರಿ ಚೀರುತ್ತ ಓಡಿದರು ಅಲ್ಲಿಂದ.

''ನಮ್ಮದೆ ತಪ್ಪು, ನಾವದನ್ನು ಕೆರಳಿಸಬಾರದಿತ್ತು'' ಎಂದಳು ಸೋಮಿ.

ರಾಮಿಗೆ ಕಣ್ಣಲ್ಲಿ ನೀರು. ಅದು ಕಚ್ಚದಿದ್ದರೂ ಉಗುರು ತಾಗಿ ಬರೆಯಾಗಿತ್ತು ತೋಳಿನಲ್ಲಿ. ಇಬ್ಬರೂ ಹಿಂದಿರುಗಿದಾಗ ಹೇಂಟೆಯೊಂದು ತನ್ನ ಪುಟ್ಟ ಪುಟ್ಟ ಮರಿಗಳಿಗೆ ಕಾಳು ಹೆಕ್ಕಿಕೊಡುತಿತ್ತು. ಕಸವನ್ನು ಕಾಲಿನಿಂದ ಕೆದಕುತಿದ್ದಾಗ ಮರಿಯೊಂದು ಈಚೆಗೆ ಹಾರಿ ಬಿತ್ತು ಅದರ ಕಾಲಿಗೆ ಸಿಕ್ಕಿ. ಮುದ್ದು ಮುದ್ದಾದ ಹೂಮರಿಯನ್ನು ಕೈಗೆತ್ತಿಕೊಂಡಳು ಸೋಮಿ. ಆ ಮರಿ ಸುಮ್ಮನಿರಬೇಕೆ? ಚೀಂ! ಚೀಂ! ಎಂದು ಕೂಗತೊಡಗಿತು. ತಾಯಿಯ ಕಿವಿಗೆ ಮರಿಯ ಕೂಗು ಬಿತ್ತೋ ಇಲ್ಲವೋ ಅದು ಮೈಮೇಲೆ ಚಕ್ಕನೆ ಹಾರಿ ಒದ್ದು ಕಚ್ಚಿತು. ಸೋಮಿ ಮರಿಯನ್ನು ಬಿಟ್ಟು 'ನಾನು ಮರಿಯನ್ನು ಮುದ್ದಿಗಾಗಿ ಹಿಡಿದುಕೊಂಡೆ ಅಷ್ಟೆ. ಏನೂ ಹಿಂಸೆ ಮಾಡಲಿಲ್ಲ. ಕೆಟ್ಟ ಕೋಳಿ ಹಾರಿ ಕಚ್ಚಿತಲ್ಲ.' ಎಂದಳು ಕೈಯನ್ನು ಉಜ್ಜಿಕೊಳ್ಳುತ್ತ.

''ತಾಯಿ ಅಲ್ಲವೇ? ಮರಿ ಹಿಡಿದುಕೊಂಡರೆ ಬಿಟ್ಟೀತೇ?''

''ಬಿಡು ಇದೇಕೋ ಸರಿಯಿಲ್ಲ; ನಾಯಿ ನಿನ್ನ ಮೇಲೆ ಹರಿಹಾಯಿತು. ಕೋಳಿ ನನ್ನ ಮೇಲೆ. ನಡೆ, ಮನೆಗೆ ಹೋಗೋಣ.''

''ಹಾಂ! ನೀನು ಹೇಳಿದ್ದು ಸರಿ.''

ಇಬ್ಬರೂ ಮನೆಯ ಕಡೆ ತಿರುಗಿದಾಗ ರಸ್ತೆಯ ಬದಿಯ ಮೋರಿಯಲ್ಲಿ ಹರಿದಿದ್ದ ಕೊಚ್ಚೆಯ ನೀರಿನಲ್ಲಿ ಹಂದಿಯೊಂದು ಹೊರಳಾಡುತಿತ್ತು. ಅದನ್ನು ನೋಡುತ್ತಲೂ, 'ಎಂತಹ ಅಸಹ್ಯ!' ಎಂದು ಜುಗುಪ್ಸೆಪಟ್ಟುಕೊಂಡರು ಮಕ್ಕಳು.

''ನೀವಿಬ್ಬರೂ ಬನ್ನಿ! ಒಟ್ಟುಗೂಡಿ ಆಡೋಣ. ನನಗೆ ನೀವಿಬ್ಬರೂ ಸರಿಯಾದ ಗೆಳೆಯರು....! ನನಗೆ ನಿಮ್ಮ ಮೇಲೆ

ತುಂಬಾ ಪ್ರೀತಿ ಇದೆ. ನಾನೂ ನಿಮ್ಮಂತೆಯೇ ಆಡಲು ಸಂಗಾತಿ ಇಲ್ಲದೆ ಬೇಸರಪಟ್ಟುಕೊಂಡಿರುವೆ. ಬನ್ನಿ, ಬನ್ನಿ!'' ಎಂದು ಕರೆಯಿತು ಆನಂದದಿಂದ.

''ಥೂ! ಥೂ! ನಿನ್ನೊಂದಿಗೆ? ನೀನು ಕೊಳಕು ಹಂದಿ!''

''ನನ್ನದೂ ನಿಮ್ಮದೂ ರೀತಿ-ನೀತಿ ಒಂದೇ! ಹೆಚ್ಚು ವ್ಯತ್ಯಾಸವಿಲ್ಲವಲ್ಲ ಬನ್ನಿ! ಬನ್ನಿ!''

''ಇಸ್ಸಿಸ್ಸೀ? ನಿನ್ನ ಜೊತೆ ಆಡುವುದುಂಟೇ?''

ಆ ಕೂಡಲೇ ಹಂದಿ ದಡಕ್ಕನೆ ಎದ್ದು ಬಂದಿತು. ಅದರಿಂದ ತಪ್ಪಿಸಿಕೊಂಡು ಹೋಗಬೇಕೆನ್ನುವುದರೊಳಗಾಗಿ ಅದು ಮೈಗೆ ಮೈ ತೀಡಿತು.

''ಅಯ್ಯೋ, ನಿನಗೇನು ಕೇಡು! ನಮ್ಮ ಮೈಯನ್ನೇಕೆ ಕೊಳಕು ಮಾಡುತ್ತಿ?''

ಹಾಗೆಂದರೆ ಅದು ಕೇಳಬೇಕಲ್ಲ, ಹುಡುಗಿಯರನ್ನು ಮುದ್ದು ಮಾಡುವ ಸಲುವಾಗಿ ಹಿಂದಿಂದೆಯೇ ಬಂದು ಇಬ್ಬರಿಗೂ ಮೈ ತೀಡಿತು. ದುರ್ವಾಸನೆಯ ಕೊಚ್ಚೆಯ ಮಡ್ಡಿ ಇಬ್ಬರ ಮೈಗೂ ಲೆಪ್ಪದಂತೆ ಅಂಟಿತು. ವಾಸನೆಯೋ ವಾಸನೆ. ಇಬ್ಬರೂ ಅಳುತ್ತಲೇ ಗುಡಿಸಲಿಗೆ ಓಡಿದರು.

ಆಗ ಇನ್ನೂ ಮಧ್ಯಾಹ್ನ. ತಂದೆ-ತಾಯಿ ಬರುವುದು ಸಾಯಂಕಾಲ. ಅಲ್ಲಿಯವರೆಗೆ ತಾಳಿಕೊಳ್ಳದೆ ಗತಿಯಿಲ್ಲ. ಇಬ್ಬರೂ ಗೋಳೋ ಎಂದು ಅಳ ಹತ್ತಿದರು. ಬಿಸಿಲ ಬೇಗೆಯನ್ನು ತಾಳಲಾರದ ಹಂದಿ ಕೊಚ್ಚೆಯಲ್ಲಿ ಮತ್ತೆ ಬಿದ್ದೆದ್ದು ಅವರ ಹಿಂದೆಯೇ ಗುಡಿಸಲಿಗೆ ನುಗ್ಗಿ ಅಲ್ಲಿಯೇ ಬಿದ್ದುಕೊಂಡಿತು. ಓಡಿಸಿದರೂ ಹೋಗದು. ವಾಸನೆ ಮೂಗು ಬಾಯಿಗಳನ್ನು ಮುತ್ತಿತು.

ರಾಮಿ-ಸೋಮಿ ಅದನ್ನು ಓಡಿಸಲು ಪ್ರಯತ್ನಿಸಿದರೂ ಅದು ಬಿದ್ದಲ್ಲಿಂದ ಏಳದೆ ಹಾಯಾಗಿ ನಿದ್ದೆ ಹೋಯಿತು. ಇಬ್ಬರೂ ಹೊರಬಂದು ಬಾಗಿಲಲ್ಲಿ ಕಾದು ಕುಳಿತರು.

ತಾಯಿ-ತಂದೆ ಬಂದಾಗ ಸಾಯಂಕಾಲ.

"ಏನಾಯಿತು ಮಕ್ಕಳೇ?"

ಮಕ್ಕಳು ನಡೆದುದನ್ನು ಹೇಳಿಕೊಂಡು ಅತ್ತರು. ಒಳ ಬಂದು ನೋಡಿದರೆ ಹಂದಿ ಇನ್ನೂ ಮಲಗಿಯೇ ಇದೆ! ಮಂಜು ದೊಣ್ಣೆಯಿಂದ ಬಾರಿಸಿ ಹಂದಿಯನ್ನು ಓಡಿಸಿದ. ನೆಲವೆಲ್ಲಾ ಕೆಸರು, ವಾಸನೆಮಯ, ಕೆಸರು ಬಳಿದು ನೀರು ತಂದು ಕಾಯಿಸಿ ಮಕ್ಕಳಿಗೆ ಸ್ನಾನ ಮಾಡಿಸಬೇಕಾದರೆ ಕತ್ತಲು ಮಸುಗುತಿತ್ತು. ತಾಯಿ ಗದರಿಸಿದಳು 'ಶಾಲೆಯಲ್ಲಿ ಕಲಿಯದೆ ಮನೆಯಲ್ಲಿದ್ದರೆ ಆಗುವುದೇ ಹೀಗೆ. ಬಾಗಿಲು ಮುಚ್ಚಿದರೆ ಹಂದಿಯೆಲ್ಲಿ ಒಳ ಬರುತಿತ್ತು? ನಿಮಗೆ ಅಷ್ಟೂ ತಿಳಿಯಲಿಲ್ಲ. ಹೀಗೇ ಆಗಬೇಕು!'

"ಇಲ್ಲಮ್ಮಾ! ಇನ್ನು ನಾವು ನಿತ್ಯ ಶಾಲೆಗೆ ಹೋಗುವುದೆಂದು ತೀರ್ಮಾನಿಸಿದ್ದೇವೆ!"

"ಖಂಡಿತವಾಗಿ?"

"ಹೌದಮ್ಮಾ!" ಎಂದರು ಇಬ್ಬರೂ.

ಅಂದಿನಿಂದ ಆ ಮಕ್ಕಳು ಶಾಲೆಗೆ ಹೋಗಿ ವಿದ್ಯೆಬುದ್ಧಿ ಕಲಿತು ಬುದ್ಧಿವಂತರಾದರು.

ಮರಳಿ ಮರಳಿ ಯತ್ನ ಮಾಡುವುದೇ
ಉತ್ತಮ ಬಾಳಿಗೆ ಅಡಿಗಲ್ಲು.
ದೃಢ ಮನದಿಂದ ದೃಢ ನಿಲುವಿನಿಂದ
ಕಠಿಣವಾದರೂ ಸಾಧನೆ ಸುಸಾಧ್ಯ.

# ರಸಾಯನ

ಪುಟ್ಟಿ ಬೂದು ಬಣ್ಣದ ಮುದ್ದು ಮುದ್ದಾದ ಮೊಲ.

ಅದಕ್ಕೆ ಚಿಟ್ಟಿ-ಕಿಟ್ಟಿ ಎಂಬ ಎರಡು ಪುಟ್ಟ ಪುಟ್ಟ ಮರಿಗಳು. ಅದು ವಾಸ ಮಾಡುತಿದ್ದುದು ಬೆಟ್ಟದ ಬದಿಯ ಗವಿಯಲ್ಲಿ. ಅದಕ್ಕೆ ಮರಿಗಳ ಮೇಲೆ ಬಲು ಪ್ರೀತಿ. ದಿನವೂ ಹೊರ ಹೋಗಿ ಎಲ್ಲೆಲ್ಲಿಂದಲೋ ಹಣ್ಣು-ಕಾಯಿ-ತರಕಾರಿಗಳನ್ನು ತಂದು ಕೊಡುತಿತ್ತು. ಮಕ್ಕಳು ದಿನವೂ ತಾಯಿ ಹಿಂದಿರುಗಿ ಬರುವುದನ್ನೇ ಇದಿರು ನೋಡುತಿದ್ದುವು ಗವಿಯ ಬಾಗಿಲಲ್ಲಿ.

ಪುಟ್ಟಿ ಕ್ಯಾರೆಟ್ ತಂದುಕೊಟ್ಟು ಹೇಳಿತು 'ಒಂದು ಬಾಳೆಹಣ್ಣಿನ ಚಿಪ್ಪನ್ನು ಕಿತ್ತಿಟ್ಟು ಬಂದಿರುವೆ. ಈಗ ತರಬೇಕು. ನೀವು ಬಾಗಿಲು ಮುಚ್ಚಿಕೊಳ್ಳಿ. ತೋಳ ಬಂದೀತು.

ಕಿಟ್ಟಿ-ಚಿಟ್ಟಿ ಬಾಗಿಲು ಮುಚ್ಚಿಕೊಂಡುವು. ಪುಟ್ಟಿ ಚಂಗನೆ ನೆಗೆಯುತ್ತ ತೋಟದ ಕಡೆ ಹೊರಟಿತು. ತೋಟಗಾರ ಕೊಯ್ದ ಬಾಳೆ ಗೊನೆಯಲ್ಲಿ ಸಣ್ಣ ಚಪ್ಪನ್ನು ಕಿತ್ತು ಅವುಚಿಟ್ಟು ಬಂದಿತ್ತು ಹುಲ್ಲು ಹೊದರಿನಲ್ಲಿ. ಐದು ಕಾಯಿಗಳಿದ್ದ ಚಿಪ್ಪು ಅದು. ಪುಟ್ಟಿ ಅದನ್ನು ಕಚ್ಚಿಕೊಂಡು ಓಡಿ ಓಡಿ ಬಿಲ ಸೇರಿತು. ಮಕ್ಕಳು ಹಣ್ಣಿಗಾಗಿ ಕಾದಿದ್ದರು. ತಾಯಿ ತಂದದ್ದು ಹಣ್ಣಲ್ಲ ಕಾಯಿ.

''ಇದೇನಮ್ಮಾ ಕಾಯಿ ತಂದಿದ್ದೀಯೇ?'' ಚಿಟ್ಟಿ ಕೇಳಿತು.

''ಇನ್ನು ಮೂರು ನಾಲ್ಕು ದಿನಗಳಲ್ಲಿ ಹಣ್ಣಾಗುತ್ತವೆ. ಆಗ

ನಾನು ಚೆನ್ನಾದ ರಸಾಯನ ಮಾಡಿಕೊಡುವೆ.''

''ಓ! ಅದೆಂತಹ ರುಚಿ!''

ಮರಿಗಳು ಕುಣಿದಾಡಿದುವು. ಬಾಳೆಯ ಕಾಯಿಯನ್ನು ಮುಟ್ಟಿ ಮುಟ್ಟಿ ನೋಡಿದುವು. ಮೂಸಿ ಮೂಸಿ ನೋಡಿದುವು. ಆನಂದವೋ ಆನಂದ. ಖುಷಿಯೋ ಖುಷಿ.

''ನೀನು ಹಣ್ಣುಗಳನ್ನೇ ತರಬೇಕಾಗಿತ್ತು.''

''ಹಣ್ಣಿರಲಿಲ್ಲ. ಮೂರು ನಾಲ್ಕು ದಿನಗಳಲ್ಲಿ ಹಣ್ಣಾಗುತ್ತೆ.''

ಮತ್ತೆರಡು ದಿನಗಳು ಮರಿಗಳಿಗೆ ಕ್ಯಾರಟ್ಟೇ ಆಹಾರ. ಮತ್ತಾವ ಕಾಯಿ ಕಡ್ಡಿಯೂ ಸಿಕ್ಕಿರಲಿಲ್ಲ. ತಾಯಿ ಆಹಾರಕ್ಕಾಗಿ ಹೊರ ಹೊರಟಿತು. ಬಾಗಿಲು ಮುಚ್ಚಿಕೊಂಡು ಕಾದಿದ್ದ ಮರಿಗಳಿಗೆ ಬೇಸರ. ಏನಾದರೂ ತಿನ್ನುವ ಆಕರ.

ಚಿಟ್ಟಿ ಕೇಳಿತು ''ಬಾಳೆಕಾಯಿ ತಿನ್ನೋಣವೇ?''

''ಅವು ಇನ್ನೂ ಹಣ್ಣಾಗಲಿಲ್ಲವಲ್ಲಾ?''

''ಆಗದಿದ್ದರೇನು? ಹಾಂ! ನಿನಗೊಂದು, ನನಗೊಂದು.

ಆ ಕೂಡಲೇ ಬಾಳೆಯ ಕಾಯಿಗೆ ಬಾಯಿ ಹಚ್ಚಿ ಕಚ್ಚಿದುವು ಮರಿಗಳು. ಕರಂ ಕರಂ ಅಗಿದು ತಿನ್ನುತ್ತಿದ್ದರೆ ಬಾಯಿ ಅಂಟು ಅಂಟು. ಮುಚ್ಚಿದರೆ ತುಟಿಗಳು ಬಿಗಿಯುತ್ತವೆ. ಆದರೂ ತಿಂದು ಮುಗಿಸಿದುವು.

ಅದೇ ವೇಳೆಗೆ ತಾಯಿ ಒಳಗೆ ಬಂದಳು.

''ಇದೇನು ಮಾಡಿದ್ದು ಮಕ್ಕಳಿರಾ! ಬಾಳೇಕಾಯಿ ಹಣ್ಣಾಗುವುದರೊಳಗೆ ತಿಂದಿದ್ದೀರಿ!''

''ತುಂಬಾ ಹಸಿವಾಗಿತ್ತು ಅದಕ್ಕೇ....''

''ಬಾಯಿ ಅಂಟಾಗಿದೆ ಏನು ಮಾಡೋಣ?''

''ಹಸಿರು ಕಾಯಿ ತಿಂದರೆ ಹಾಗೆಯೇ.''

''ಈಗ ಅಂಟು ತೆಗೆಯುವುದು ಹೇಗೆ?''

''ಹಸುರು ಹುಲ್ಲಿನಿಂದ ಬಾಯಿ ಉಜ್ಜಿರಿ!''

ಹುಲ್ಲು ಒಣಗಿ ಗರಿಗರಿಯಾಗಿತ್ತು. ಕೈ ಬಾಯ್ ತೀಡಿದರೆ ಚುಯ್ ಚುಯ್ ಚುಚ್ಚಿತು.

ಮರಿಗಳು ಕುಯ್ ಮುರ್ ಎಂದುವು.

ತಾಯಿ ಹೊರಹೋಗಿ ಹಸಿರೆಲೆಗಳನ್ನು ಕಿತ್ತು ತಂದು ಮಕ್ಕಳ ಕೈ ಬಾಯಿ ತೀಡಿತು. ಆದರೂ ಹೋಗದು ಅಂಟು. ಬಾಯಿ ಮುಚ್ಚಿದರೆ ತುಟಿಗಳು ಅಂಟಿಕೊಳ್ಳುತ್ತವೆ! ಮಕ್ಕಳಿಗೀಗ ಫಜೀತಿ!

''ಅವು ಹಣ್ಣಾಗಿದ್ದಿದ್ದರೆ ರಸಾಯನ ಮಾಡಬಹುದಿತ್ತು. ಕಾಯಿ ತಿಂದು ಬಾಯಿಯನ್ನು ಅಂಟು ಮಾಡಿಕೊಂಡಿರಿ'' ಎಂದಿತು ತಾಯಿ.

ಎರಡು ಮರಿಗಳೂ ಅಂಟು ಬಾಯಿಯನ್ನು ತೆರೆಯಲಾರದೇ ತೆರೆದು ''ನಮ್ಮ ಹೊಟ್ಟೆಯಲ್ಲೇ ರಸಾಯನವಾಗಿದೆ'' ಎಂದುವು ಮುಸಿ ಮುಸಿ ನಗುತ್ತ.

ಕೀರ್ತಿಗೆ ಶರಣಾಗದಿರ್ದೊಡೆ
ಸ್ವಾರ್ಥಕೆ ಬಲಿ ಬೀಳದಿರ್ದೊಡೆ
ಸನ್ಮತಿಯ ಮೊಗ್ಗೆ ಅರಳಿ ಒಲಿವುದು
ಕಸ್ತೂರಿಯ ಪರಿಮಳದೊಲ್



# ರಂಗನ ಸಾಹಸ

ರಂಗ ಬಲು ಚೂಟಿಯಾದ ಹುಡುಗ. ಅವನಿನ್ನೂ ಹದಿಹರೆಯದ ಪೋರ.

ಮನೆಯ ದನಗಳನ್ನು ಬೆಟ್ಟದ ತಪ್ಪಲಿಗೆ ಮೇಯಿಸಲು ದಿನವೂ ಹೊಡೆದುಕೊಂಡು ಹೋಗುತ್ತಿದ್ದ. ಬೆಳಗ್ಗೆ ಹತ್ತು ಗಂಟೆಗೆ ಹೊಡೆದುಕೊಂಡು ಹೋದರೆ ಹಿಂದಿರುಗುವುದು ಸಂಜೆಯ ಮೇಲೆ. ಒಮ್ಮೊಮ್ಮೆ ನೆರೆಹೊರೆಯ ಹುಡುಗರೂ ತಮ್ಮ ತಮ್ಮ ದನಗಳನ್ನು ಹೊಡೆದುಕೊಂಡು ಬರುತ್ತಿದ್ದರು. ಬಯಲ ತುಂಬ ಹಸುಗಳು ಕೂಡುತಿದ್ದುವು. ಹುಡುಗರು ಮಾತುಕತೆಯಾಡುತ್ತಲೋ ಅಥವಾ ಜನಪದ ಗೀತೆಗಳನ್ನು ಹಾಡುತ್ತಲೋ ಹೊತ್ತು ಕಳೆಯುತ್ತಿದ್ದರು. ರಂಗ ಹಾಡುವುದರಲ್ಲಿ ನಿಪುಣ. ದಾಸರ ಹಾಡುಗಳೂ ಬರುತ್ತವೆ. ಚಿತ್ರಗೀತೆಗಳೂ ಬರುತ್ತವೆ. ಸುಗ್ಗಿ ಕುಣಿತವನ್ನೂ ಬಲ್ಲ. ಈ ಎಲ್ಲಾ ಚೆಲ್ಲಾಟಗಳಿಂದ ಹೊತ್ತು ಸರಾಗವಾಗಿ ಉರುಳುತ್ತದೆ. ದನಗಾಹಿತನದಿಂದ ಅವನಿಗೆ ಎಂದೂ ಬೇಸರ ಮೂಡುತ್ತಿರಲಿಲ್ಲ.

ಅಂದು ಬಯಲನ್ನು ಮುಟ್ಟಿದ ಸ್ವಲ್ಪ ಹೊತ್ತಿನಲ್ಲೇ ಕಿಟ್ಟು ತನ್ನ ದನಗಳೊಂದಿಗೆ ಬಂದು ಕೂಡಿಕೊಂಡ.

''ನೀನು ಕೃಷ್ಣ ಎಂದು ಹೆಸರು ಪಡೆದುಕೊಂಡುದಕ್ಕೆ

ಸರಿಯಾಗಿ ಕೊಳಲೂದುವುದನ್ನು ಕಲಿತುಕೊಂಡಿದ್ದಿದ್ದರೆ ಒಳ್ಳೆಯದಿತ್ತು. ಸಧ್ಯ ನೀನು ಏನೇನೂ ಕಲಿಯದ ಸೋಮಾರಿಯಾಗಿದ್ದಿ.''

''ಕಲಿಯುಬೇಕು. ಇದುವರೆಗೆ ಆ ಯೋಚನೆಯೇ ಬಂದಿರಲಿಲ್ಲ. ನೀನು ಹೇಳಿದ್ದು ಒಳ್ಳೆಯದಾಯ್ತು. ಇನ್ನು ಪ್ರಯತ್ನಿಸುವೆ.''

ಇಬ್ಬರೂ ಒಂದು ಬಂಡೆಯನ್ನೇರಿದರು. ರಂಗ ಹಾಡತೊಡಗಿದ. ಸದ್ದಿಲ್ಲದ ತಾಣವಾದುದರಿಂದ ಸಂಗೀತ ಅಲೆ ಅಲೆಯಾಗಿ ಗಾಳಿಯಲ್ಲಿ ತೇಲಿತು. ದನಗಳು ಪರಪರನೆ ಹುಲ್ಲು ಕಿತ್ತು ಮೇಯುತ್ತಿವೆ. ಹುಲ್ಲು ಹಸನಾಗಿದ್ದದರಿಂದ ಅವುಗಳಿಗೂ ಹುರುಪು. ಹೊತ್ತು ಮೇಲೇರಿತು. ನೆತ್ತಿ ಸುಡುವಷ್ಟು ಚುರುಚುರು ಬಿಸಿಲು. ಹುಡುಗರಿಗೆ ಬಂಡೆಗಲ್ಲು ಚಾಚುವ ನೆರಳಿಂದಲೇ ಹೊತ್ತಿನ ಅರಿವು.

''ಒಂದು ಗಂಟೆಯಾಯಿತು ಬುತ್ತಿ ತಿನ್ನೋಣವೇ?''

''ಆಗಲಿ ರಂಗ. ನನಗೂ ಹಸಿವು.''

ಇಬ್ಬರೂ ಸಣ್ಣ ಕೆರೆಯ ಬಳಿ ಬುತ್ತಿ ಬಿಚ್ಚಿದರು. ರಾಗಿರೊಟ್ಟಿ ಚಟ್ನಿಯನ್ನು ತಿಂದು ನೀರು ಕುಡಿದು ಮರದ ನೆರಳಿನಲ್ಲಿ ಕುಳಿತರು. ಹಸುಗಳೂ ಅಲ್ಲಲ್ಲಿ ಮೆಲಕು ಹಾಕುತ್ತಾ ಮಲಗಿದುವು.

ಬೆಟ್ಟದ ಕಿಬ್ಬದಿಯಲ್ಲಿ ಏನೇನೋ ಸರಸರ ಸದ್ದು. ಇಬ್ಬರೂ ಅತ್ತಲೇ ದೃಷ್ಟಿ ನೆಟ್ಟರು. ಕುರುಚಲು ಗಿಡಗಳು ಮೆಲ್ಲನೆ ಅಲುಗುತ್ತಿವೆ. ಏನಿರಬಹುದು? ರಂಗ ಎದ್ದು ನಿಂತು ನೋಡಿದ ಏನೂ ಕಾಣಿಸುತ್ತಲೇ ಇಲ್ಲ. ಆ ಸದ್ದು ಬರಬರುತ್ತ

ಮುಂಬರಿಯಿತು. ಯಾವುದೋ ಪ್ರಾಣಿ ಇರುವುದು ಖಚಿತ. ರಂಗ ನೋಡಿಯೇ ನೋಡಿದ. ಸ್ವಲ್ಪೇ ಹೊತ್ತಿನೊಳಗಾಗಿ ಕಂಡಿದ್ದು ಹುಲಿ! ಹೆಬ್ಬುಲಿ!! ಅದಕ್ಕೂ ತಮಗೂ ಇಪ್ಪತ್ತು ಮಾರು ಅಷ್ಟೆ. ಅದು ಕುರುಚಲು ಗಿಡಗಳ ಮರೆಯಿಂದ ದಾಟಿತ್ತೋ ಇಲ್ಲವೋ, ಇನ್ನೇನು ಇತ್ತ ಕುಪ್ಪಳಿಸಬೇಕು? ರಂಗ ಕೂಡಲೇ ಹೆಗಲ ಮೇಲಿದ್ದ ಕೆಂಪು ವಲ್ಲಿಯನ್ನು ಬಿಚ್ಚಿ ಬೀಸುತ್ತ ಜೋರಾಗಿ 'ಹುಯ್ಯೋ ಹುಯ್ಯೋ!' ಎಂದು ಕೂಗತೊಡಗಿದ. ಮಲಗಿದ್ದ ದನಗಳೆಲ್ಲಾ ದಿಕ್ಕಾಪಾಲಾಗಿ ಓಡಿಹೋದುವು. ರಂಗ ಕೆಂಪು ವಲ್ಲಿ ಬೀಸಿಯೇ ಬೀಸಿದ! ಕೂಗು ಇನ್ನಷ್ಟು ಜೋರಾಯಿತು.

ಹುಯ್ಯೋ! ಹುಯ್ಯೋ!! ಹುಯ್ಯೋ!!

ಹುಲಿ ಕೆಂಪು ವಲ್ಲಿಯ ಹಾರಾಟ, ವಿಚಿತ್ರ ಕೂಗುಗಳಿಂದ ಹೆದರಿ ಹಿಮ್ಮೆಟ್ಟಿ ಓಡಿಹೋಯಿತು.

ಅದು ಓಡಿಹೋದುದನ್ನು ಕಂಡರೂ ಕೂಗುತ್ತಲೇ ಇದ್ದಾನೆ ರಂಗ! ಹುಯ್ಯೋ! ಹುಯ್ಯೋ!

ಸ್ವಲ್ಪ ಹೊತ್ತು ಕಳೆಯಿತು. ಹುಲಿ ಹೋದುದು ಖಚಿತವಾದ ಮೇಲೆ ಹಿಂದಿರುಗಿ ನೋಡುತ್ತಾನೆ ಕಿಟ್ಟು ಇಲ್ಲವೇ ಇಲ್ಲ!

'ಎಲ್ಲಿ ಹೋದ ಕಿಟ್ಟು? ಕಿಟ್ಟೂ! ಕಿಟ್ಟೂ!!'

ರಂಗ ಬಂಡೆಯಿಂದ ಇಳಿದು ಅಲ್ಲೆಲ್ಲಾ ನೋಡಿದರೆ ಒಂದು ದೊಡ್ಡ ಪೊದೆಯಲ್ಲಿ ಅಡಗಿಕೊಂಡು ಗಡಗಡ ನಡುಗುತಿದ್ದಾನೆ ಕಿಟ್ಟು.

'ಹುಲಿ ಹೋಯಿತು? ಎದ್ದು ಬಾರೋ!'

‘ಓ! ಅದು ನಿಜವಾಗಿಯೂ ಹೋಯಿತೇ? ನಾನು ಬಹಳ ಹೆದರಿಬಿಟ್ಟೆ....ನಿನ್ನ ಧೈರ್ಯವೇ ಧೈರ್ಯ!’

‘ಧೈರ್ಯಗೆಟ್ಟರೆ ನನ್ನನ್ನೇ ತಿನ್ನುತಿತ್ತು ಅದು!’

ಇಬ್ಬರೂ ಹೊರಟರು. ದನಗಳು ಆಗಲೇ ಊರು ಸೇರಿವೆ. ಸುದ್ದಿ ಊರಲೆಲ್ಲಾ ಹರಡಿತು. ರಂಗನ ಸಮಯಸ್ಫೂರ್ತಿಯನ್ನು ಕೊಂಡಾಡಿದರು ಜನ. ಹುಡುಗನಿಗೆ ಹೂ ಹಾರ ತೊಡಿಸಿ ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸಿದರು ಬಂಧುಗಳು. ಅದರಿಂದ ರಂಗ ಇನ್ನಷ್ಟು ಉತ್ತೇಜಿತನಾದ.

‘ನನ್ನ ಕೂಗು ಅದಕ್ಕೆಲ್ಲಿ ಮುಟ್ಟೀತು? ಕೆಂಪು ವಸ್ತ್ರದ ಹಾರಾಟ ಅದರ ಧೃತಿಗೆಡಿಸಿತು.’

ರಂಗನ ಮಾತಿಗೆ ಎಲ್ಲರೂ ತಲೆದೂಗಿ ಅವನನ್ನು ಮುದ್ದಿಸಿ ‘ಶಹಬ್ಬಾಸ್!!’ ಎಂದರು.

ಹುಡುಗ ತುಂಬಾ ಹುರುಪುಗೊಂಡ.

ವಿಜ್ಞಾನ ಯುಗದಲಿ
ಸಂಜನಿಸಿದ ಮಕ್ಕಳು
ಸುಜ್ಞಾನ ಪಿಪಾಸಿಗಳಾಗಿ
ರಾಷ್ಟ್ರಪ್ರಗತಿಯ
ನಿಷ್ಠೆಯಲಿ ಪ್ರತಿಷ್ಠಿತರಕ್ಕು



## ರೂಬಿ ಹಿಲ್

ಚಿಲಿ ದೇಶದಲ್ಲಿ ಮಿರಾಲಿ ಎಂಬ ಅತೀ ಬಡ ಹುಡುಗನಿದ್ದ. ತೀರಾ ಮುಗ್ಧ ಹುಡುಗ. ಬಡತನವೇ ಅವನ ನಿತ್ಯ ಸಂಗಾತಿ. ಅವನು ವಿದ್ಯೆ-ಬುದ್ಧಿ ಕಲಿಯಲಿಲ್ಲ.

ಹೆಚ್ಚು ಗಳಿಸಿಕೊಳ್ಳುವ ವಿಧಿವಿಧಾನಗಳನ್ನು ಅರಿಯ.

ಕೂಲಿಯಿಂದ ದಿನಕ್ಕೆ ಎಂಟಾಣೆ ದೊರೆಯುತಿತ್ತು. ಒಂದ್ಹೊತ್ತಿನ ಊಟಕ್ಕೆ ಎಂಟಾಣೆ ಸಾಕು. ಉಳಿದೆರಡು ಹೊತ್ತುಗಳು ಉಪವಾಸ. ಹೊಟ್ಟೆತುಂಬ ನೀರು ಕುಡಿದು ಕಾಲಹರಣ ಮಾಡುತಿದ್ದ. ಅವನು ಒಳ್ಳೆಯ ಹುಡುಗ. ಅವನ ತಾಯಿ ತಂದೆಗಳಿಗೆ ಮನೆ ತುಂಬ ಮಕ್ಕಳಿದ್ದುದರಿಂದ ಇವನನ್ನು 'ಎಲ್ಲಾದರೂ ದುಡಿದುಕೋ' ಎಂದು ಹೊರಗಟ್ಟಿದರು.

ವಿದ್ಯೆಯನ್ನು ಕಲಿತಿಲ್ಲವಾದ್ದರಿಂದ ಬಹಳ ಕಷ್ಟಕ್ಕೆ ಸಿಕ್ಕಿದ.

ಹಗಲಿಡೀ ದುಡಿಯುತಿದ್ದರೂ ಕಾಸುಗಳ್ಳರಾದ ಒಡೆಯರು ಕೈತುಂಬ ಕಾಸು ಕೊಡುತ್ತಿರಲಿಲ್ಲ, ಕೊಡುವ ಕಾಸಿಗೆ ತಕ್ಕಂತೆ ಅರ್ಧ ದಿವಸ ಕೆಲಸ ಮಾಡುತ್ತೇನೆಂದರೂ ಒಪ್ಪುತ್ತಿರಲಿಲ್ಲ ಭೂ ಮಾಲೀಕರು. ದುಡಿಯುವುದು ತಪ್ಪಲಿಲ್ಲ. ಕಾಸಿಗೆ ಗತಿಯಿಲ್ಲ. ಬದುಕಿಗೆ ಸುಖವಿಲ್ಲ. ಹೀಗಾಯ್ತು ಅವನ ಪಾಡು.

ಜಮೀನು ತೋಟಗಳಾಚೆ ದೂರದಲ್ಲಿ ನೀಲಿ ಬೆಟ್ಟದ ಶಿಖರ ಮುಗಿಲು ಮುದ್ದಿಸುವಷ್ಟು ಎತ್ತರವಾಗಿ ನಿಮಿರಿ ನಿಂತಿತ್ತು.

ಅದನ್ನು ನೋಡುತಿದ್ದರೆ ಅದರಲ್ಲೇನೋ ವಿಶೇಷವಿರಬೇಕು ಎಂದೆನಿಸುತ್ತದೆ ಮನಸ್ಸಿಗೆ. ಕೆಲಸ ನಿಲ್ಲಿಸಿ ದಣಿವಾರಿಸಿಕೊಳ್ಳಲು ಒತ್ತಟ್ಟಿಗೆ ಕುಳಿತುಕೊಂಡರೆ ದೃಷ್ಟಿ ಬೇಡ ಬೇಡವೆಂದರೂ ಅತ್ತ ಹರಿಯುತ್ತದೆ. ಅದನ್ನು ನೋಡುತಿದ್ದರೆ ದೃಷ್ಟಿಯನ್ನು ಅಲ್ಲಿಂದ ಕೀಳಲಾಗುವುದಿಲ್ಲ. ಆ ಬೆಟ್ಟದ ಹೆಸರಾಗಲೀ ಎಷ್ಟು ದೂರದಲ್ಲಿದೆ ಎಂಬುದಾಗಲೀ ತಿಳಿಯದು. ಬಹಳ ಎತ್ತರ ಇರುವ ಅದನ್ನು ಏರಿ ನೋಡಬೇಕು. ಅದರ ಮೇಲೆ ಏನಿರಬಹುದು? ಅದರ ಮೂಲಕ ಸ್ವರ್ಗಕ್ಕೆ ಹೋಗಬಹುದೇನೋ ಎಂದೆಲ್ಲಾ ಯೋಚನೆ ಬರುತಿತ್ತು. ಹಾಗೊಂದು ವೇಳೆ ಏರಿ ಹೋಗಬಲ್ಲೆನಾದರೆ ಸ್ವರ್ಗದಲ್ಲಿ ಸುಖವಾಗಿರಬಹುದು. ಈ ಬಾಳಿನ ಭಂಗ ಬವಣೆಗಳು ಬೇಡವೇ ಬೇಡ ಎಂದು ಬಾರಿಬಾರಿಗೂ ತನ್ನೊಳಗೇ ಯೋಚಿಸುತಿದ್ದ-ಮಿರಾಲಿ.

ಅದರ ಮೇಲೆ ಹದ್ದುಗಳು-ಬಲೂ ಗಾತ್ರದ ಹದ್ದುಗಳು ಹಾರಾಟ ನಡೆಸುತಿದ್ದುದು ಮತ್ತು ಅದರ ಮೇಲೆ ತುಂಗುತಿದ್ದುದು ಚೆನ್ನಾಗಿ ಕಾಣಿಸುತ್ತದೆ.

ಅದರ ಸುತ್ತಮುತ್ತ ತೋಟ ಮನೆಗಳಾಗಲೀ ಜನ ವಸತಿಯಾಗಲೀ ಹೋಗಿಬರುವ ದಾರಿಯಾಗಲೀ ಕಾಣಿಸುವುದಿಲ್ಲ. ಯಾರನ್ನಾದರೂ ಕೇಳಿ ತಿಳಿಯೋಣವೆನ್ನುವ ಆಸೆ, ಯಾರನ್ನು ಕೇಳಬೇಕೋ ಅದೂ ತಿಳಿಯುತ್ತಿಲ್ಲ.

ಅದನ್ನೇರುವುದೆಂದರೆ ಒಂದೆರಡು ದಿನದಲ್ಲಿ ಹತ್ತಿ ಮುಗಿಸುವುದು ಕಷ್ಟ. ಹೋಗಿ ಬರುವುದಾದರೆ ನಾಲ್ಕಾರು ದಿನಗಳಿಗಾಗುವಷ್ಟು ರೊಟ್ಟಿ ಬುತ್ತಿ ಕಟ್ಟಿಕೊಂಡು ಬೆಟ್ಟ

ಏರಬೇಕು. ಒಪ್ಪೊತ್ತಿನ ಊಟ ಉಣ್ಣುವ ನನಗೆ ಅಂತಹ ಸೌಭಾಗ್ಯ ಲಭಿಸುವುದಾದರೂ ಹೇಗೆ?

ಮಿರಾಲಿಗೆ ಆ ಬೆಟ್ಟದ ಚಿಂತೆಯೇ ಚಿಂತೆ.

★ ★ ★ ★

ಒಮ್ಮೆ ಅವನು ತನ್ನ ಜೊತೆ ಕೂಲಿ ಮಾಡುತಿದ್ದ ಮುದುಕನನ್ನು ಕುರಿತು ಕೇಳಿದ ಆಸಕ್ತಿಯಿಂದ,

''ಅಯ್ಯಾ, ಅಜ್ಜ! ನೀನೆಂದಾದರೂ ಆ ಬೆಟ್ಟದ ಮೇಲೆ ಏರಿ ಹೋಗಿರುವೆಯಾ?''

''ಅಯ್ಯೋ, ಅದೇನು ಸಾಮಾನ್ಯದ ಬೆಟ್ಟ ಎಂದುಕೊಂಡಿರುವೆಯಾ? ಅಲ್ಲಿಗೆ ಹೋಗಿ ಬರುವಂತಿದ್ದರೆ ಇಲ್ಲಿ ಕೂಲಿ ಮಾಡುವ ಅಗತ್ಯವೇನಿತ್ತು? ಅದು ರೂಬಿ ಹಿಲ್. ಅದರ ಮೇಲೆ ರತ್ನಗಳ ರಾಶಿಯಿದೆ. ಹದ್ದುಗಳು ಕಾವಲು ಕಾಯುತ್ತಿರುವುದು ಕಾಣಿಸದೇ?''

''ರತ್ನಗಳಿಂದ ಅವುಗಳಿಗೇನು ಪ್ರಯೋಜನ?''

''ಅವುಗಳಿಗೇನೂ ಪ್ರಯೋಜನವಿಲ್ಲ. ಆದರೆ, ಅವು ರತ್ನದ ಬೆಲೆಯನ್ನು ಅರಿತುಕೊಂಡಿವೆ ಎನಿಸುತ್ತೆ. ಆ ಬೆಟ್ಟದ ಮೇಲೆ ಅಂತಹ ಹೆಮ್ಮರಗಳೇನೂ ಇದ್ದಂತೆ ಕಾಣಿಸುವುದಿಲ್ಲ. ಅವು ಗವಿಗಳಲ್ಲಿ ವಾಸ ಮಾಡುತ್ತಿರಬಹುದು.''

''ಒಮ್ಮೆ ಹತ್ತಿ ಹೋಗೋಣ ಎನಿಸುತ್ತೆ ನನಗೆ.''

''ಬಹಳ ಕಡಿದಾದ ಬೆಟ್ಟ. ಹತ್ತಿ ಹೋಗುವುದು ಬಹಳ ಕಷ್ಟ ಹಾಗೆ ಹೋಗುವಂತಿದ್ದರೆ ಈ ಜನ ಬಿಡುತಿದ್ದರೇ? ಇಷ್ಟರೊಳಗಾಗಿ ರತ್ನಗಳನ್ನು ಖಾಲಿ ಮಾಡುತಿದ್ದರು.''

''ಅದೂ ನಿಜವೇ'' ಎಂದುಕೊಂಡ ಮಿರಾಲಿ.

''ಹಾಗಾದರೆ ಈವರೆಗೆ ಯಾರೂ ಹೋಗಿಯೇ ಇಲ್ಲವೇ?''

''ಇಲ್ಲವೇ ಇಲ್ಲ.''

ಮಿರಾಲಿ ಯೋಚನೆಗೊಳಗಾದ. ನಿಂತರೂ ಅದೇ ಯೋಚನೆ. ಕುಳಿತರೂ ಅದೇ ಯೋಚನೆ.

ತನ್ನ ಅತೀವ ಬಡತನ-ದುಃಖ-ದುರ್ದೆಶೆಗಾಗಿ ಮೌನವಾಗಿ ರೋದಿಸಿತು ಮನಸ್ಸು. ಸಪ್ಪೆ ಮೋರೆಯಿಂದ ಆಲದ ಮರದಡಿಯಲ್ಲಿ ಕುಳಿತುಕೊಂಡ. ಕತ್ತಲೆ ಕವಿಯತೊಡಗಿತು. ಅವನು ಮಲಗುತಿದ್ದುದು ರೈಲು ನಿಲ್ದಾಣದ ಬೆಂಚಿನ ಮೇಲೆ ಅಥವಾ ಗೋಡೆಯ ಬದಿಯಲ್ಲಿ. ಯಾಕೋ ಅಲ್ಲಿಗೆ ಹೋಗಲೂ ಮನಸ್ಸಾಗಲಿಲ್ಲ. ಇಂದು ಇಲ್ಲಿಯೇ ಮಲಗಿಕೊಂಡರಾಯಿತು ಎಂದುಕೊಂಡ ಮನದಲ್ಲಿ.

ಮರದ ಮೇಲಿದ್ದ ಶುಕ ದಂಪತಿಗಳು ರೆಕ್ಕೆ ಬಡಿದು ಚೀಂ! ಚೀಂ! ಎಂದುವು.

ಹೆಂಡತಿ ಹೇಳಿತು ''ಬಡಹುಡುಗ ಬಹಳ ಬಳಲಿದ್ದಾನೆ ಪಾಪ.''

''ಈ ಜನ ಬಹಳ ಮೋಸಗಾರರು. ಅವನ ದುಡಿತಕ್ಕೆ ಸರಿಯಾದ ಕೂಲಿಯನ್ನು ಜಮೀನ್ದಾರ ಕೊಟ್ಟಿದ್ದರೆ ಊಟಕ್ಕೇನು ಕೊರತೆ ಇರುತಿತ್ತು? ಕೈತುಂಬ ದುಡಿಸಿಕೊಳ್ಳುತ್ತಾರೆ, ಸರಿಯಾದ ಕೂಲಿ ಕೊಡುವುದಿಲ್ಲ. ಅರೆ ಹೊಟ್ಟೆ ಊಟದಲ್ಲಿ ಬದುಕು. ಬಹಳ ಅನ್ಯಾಯ.''

''ನೀನೇ ಹೇಳು. ಹುಡುಗ ವಿದ್ಯೆ ಬುದ್ಧಿ ಕಲಿಯಲಿಲ್ಲ. ವ್ಯವಹಾರ ಜ್ಞಾನವಿಲ್ಲ. ಹೆತ್ತವರಿಂದಲೂ ವಂಚಿತನಾಗಿದ್ದಾನೆ.

ಹೀಗೇ ಆದರೆ, ಬದುಕು ಮುಂದೆಯೂ ಕಷ್ಟ. ಹೇಗಾದರೂ ಅವನಿಗೊಂದು ದಾರಿ ತೋರಿದ್ದರೆ ಒಳ್ಳೆಯದಿತ್ತು.'' ಹೆಣ್ಣು ಶುಕ ಮರುಗಿ ನುಡಿಯಿತು.

''ರೂಬಿ ಹಿಲ್‌ನಲ್ಲಿ ರತ್ನಗಳು ಸಿಕ್ಕುತ್ತವೆ; ಪ್ರಯತ್ನಿಸಿದರೆ.''

''ಅಲ್ಲಿಗೆ ಹೋಗುವುದು ಕಷ್ಟ; ಬಹಳ ಕಡಿದಾದ ಬೆಟ್ಟ; ಹುಡುಗ ಏನು ಮಾಡಬಲ್ಲ?''

''ಅದಕ್ಕೊಂದು ಉಪಾಯ ಉಂಟು. ಅಲ್ಲಿನ ಹದ್ದುಗಳು ಭಾರೀ ಹದ್ದುಗಳು. ಒಬ್ಬ ಮನುಷ್ಯನನ್ನಾಗಲೀ ಪ್ರಾಣಿಯನ್ನಾಗಲೀ ಸುಲಭವಾಗಿ ಎತ್ತಬಲ್ಲುವು. ಆಳೆತ್ತರಕ್ಕೆ ಬೆಳೆದಿರುತ್ತವೆ. ನೋಡಿದರೆ ಯಾರಿಗಾದರೂ ಭಯವಾದೀತು. ಆದರೆ ಅವು ಏನೂ ಮಾಡುವುದಿಲ್ಲ. ತುಂಬಾ ಬೃಹದ್‌ಗಾತ್ರದ ಹಕ್ಕಿಗಳು. ಅವು ಇಲ್ಲಿನ ನಿಯೂ ಹಾನ್ ಕೆರೆಗೆ ನೀರು ಕುಡಿಯಲು ಬರುತ್ತವೆ. ಆಗ ಹದ್ದಿನ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡರೆ ಅದು ರತ್ನ ಬೆಟ್ಟದ ಮೇಲಕ್ಕೆ ಒಯ್ಯುತ್ತದೆ. ಅಲ್ಲಿ ರತ್ನಗಳನ್ನು ಆಯ್ದುಕೊಂಡು ಹದ್ದು ಕೆಳಗೆ ಹಾರಿಬರುವ ಸಮಯವನ್ನು ಕಾದಿದ್ದು ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಂಡರೆ ಕೆರೆಯ ತೀರಕ್ಕೆ ತಂದುಬಿಡುತ್ತದೆ. ಆ ರತ್ನಗಳನ್ನು ಮಾರಿಕೊಂಡರೆ ಹುಡುಗ ಸುಖವಾಗಿ ಜೀವಿಸಬಹುದು.''

ಮಿರಾಲಿ ಆ ಮಾತುಕತೆಯನ್ನು ಕೇಳಿಸಿಕೊಂಡ.

ಆದರೇನು? ಧೈರ್ಯ ಸ್ವಲ್ಪವೂ ಮೂಡಲಿಲ್ಲ. ಮನದಲ್ಲಿ ನಡುಕ ಹುಟ್ಟಿತು.

   

ಮಿರಾಲಿ ಸುಮ್ಮನೆ ಕುಳಿತುಕೊಂಡ. ಮೈಮುರವಟ್ಟಂತಾಯಿತು. ಸ್ವಲ್ಪ ಹೊತ್ತಿನ ನಂತರ ರೈಲು ನಿಲ್ದಾಣಕ್ಕೆ ಮಲಗಲು ಹೋದ.

ಮರುದಿನ ಕೂಲಿ ಕೆಲಸ ಮುಗಿಸಿದನಂತರ ಪುನಃ ಆಲದ ಮರದ ಬುಡದಲ್ಲಿ ಕುಳಿತು ಶುಕ ದಂಪತಿಗಳ ಮಾತುಕತೆಯ ಮೇಲೆ ಗಮನವಿಟ್ಟ.

ಹೆಂಡತಿ ಹೇಳಿತು ''ಪಾಪ, ಮಿರಾಲಿ, ಇಂದೂ ಬಂದಿದ್ದಾನೆ. ಇನ್ನಾವ ಬಗೆಯ ಕಷ್ಟ ಸಂಕಟಗಳ ಒತ್ತಡವೋ, ನೋಡಿದರೆ, ಹುಡುಗ ದಿನದಿನವೂ ಬತ್ತುತ್ತಿರುವಂತೆ ಕಾಣಿಸುತ್ತಾನೆ. ಇವನಿಗೆ ವಿದ್ಯಾಭ್ಯಾಸ ಮಾಡಿಸದೆ ಬೀದಿಗೆ ಬಿಟ್ಟದ್ದು ತಪ್ಪು. ಪಾಪ ಬಡವ.''

''ಅದಕ್ಕೊಂದು ಪರಿಹಾರವುಂಟು.''

''ಏನು ಹೇಳು....?''

''ಒಂದು ಚೀಲದಷ್ಟು ರತ್ನಗಳನ್ನು ತಂದುಕೊಂಡರೆ ಸಾಕು. ಅದರಿಂದ ಏನೆಲ್ಲ ಮಾಡಬಹುದು? ಮನೆ ಮಠ ವಿದ್ಯೆ ಬುದ್ಧಿ ಎಲ್ಲವೂ ಸುಲಭದಲ್ಲಿ ಕೈಗೆಟಕುತ್ತವೆ. ಕೈಯಲ್ಲಿ ಹಣವಿದ್ದರೆ ವಿದ್ಯೆ ಕಲಿಯುವುದೇನು ದೊಡ್ಡದಲ್ಲ.''

ಮಿರಾಲಿ ಅವುಗಳ ಮಾತನ್ನು ಕೇಳಿಸಿಕೊಂಡು ನಿಲ್ದಾಣಕ್ಕೆ ಮಲಗಲು ಹೋದ. ಮನಸ್ಸೆಲ್ಲಾ ರೂಬಿ ಹಿಲ್ ಮೇಲಿನ ರತ್ನಗಳು ಮತ್ತು ಹದ್ದುಗಳ ಮೇಲಿತ್ತು. ಹೇಗಾದರೂ ಆ ಗಿರಿಗೆ ಹೋಗಿ ರತ್ನಗಳನ್ನು ತರಬಲ್ಲೆನಾದರೆ ನನ್ನ ಸಂಕಟ ಪರಿಹಾರವಾಗುತ್ತದೆ. ನಾನು ಹೇಗಾದರೂ ಕಷ್ಟದಿಂದ ಹೋಗಲೇಬೇಕು. ಗಿಳಿ ಹೇಳಿದಂತೆ ಆ ಹದ್ದುಗಳ ಕಾಲನ್ನು

ಹಿಡಿದುಕೊಳ್ಳುವೆ. ಅದರಿಂದ ಹಾದಿಯಲ್ಲಿ ಬಿದ್ದು ಸತ್ತರೂ ಚಿಂತೆಯಿಲ್ಲ. ಈ ಭಂಗ ಬನ್ನಗಳಿಗಿಂತ ಸಾವು ಲೇಸು....ಎಂದೆಲ್ಲಾ ಯೋಚಿಸಿತು ಮನಸ್ಸು.

ಮರುದಿನ ಮಿರಾಲಿ ಕೆಲಸ ಮುಗಿಸಿದ ನಂತರ ಮತ್ತೆ ಅದೇ ಮರದಡಿಗೆ ಬಂದು ಕುಳಿತುಕೊಂಡ. ಒಪ್ಪೊತ್ತಿನ ಊಟ. ಅತೀ ದುಡಿಮೆ. ಚಿಂದಿಬಟ್ಟೆ, ಕೊಳಕು ಮೈ, ನೋಡುವವರಿಗೆ ಕಣ್ಣೀರು ತರಿಸುವಂತಿತ್ತು ಬಾಲಕನ ಕರುಣಾಜನಕ ಸ್ಥಿತಿ.

ಆ ಗಿಣಿಗಳೂ ಅದೇ ಸಮಯಕ್ಕೆ ಬಂದು ಮರದ ಮೇಲೆ ಕುಳಿತುಕೊಂಡುವು. ಹೆಣ್ಣುಹಕ್ಕಿ ಕೊರಳನ್ನು ಕೊಂಕಿಸಿ ಬಾಲಕನೆಡೆಗೆ ನಿಟ್ಟಿಸಿ ನೋಡಿತು. ಅವನ ಸ್ಥಿತಿಗತಿಯಿಂದ ಮನಸ್ಸು ನೊಂದು ನೀರಾಯಿತು.

''ನೋಡು, ಮಿರಾಲಿ ಈವೊತ್ತೂ ಬಂದಿದ್ದಾನೆ. ಪಾಪ, ಬಹಳ ಕಷ್ಟದಲ್ಲಿದ್ದಾನೆ ಹುಡುಗ. ಅವನಿಗೆ ಏನಾದರೂ ಪರಿಹಾರ ಹೇಳು.''

''ಚೀಂ! ಚೀಂ! ನಿನ್ನೆ ಹೇಳುವುದನ್ನು ಮರೆತುಬಿಟ್ಟೆ. ಅವನು ರತ್ನಗಿರಿಗೆ ಒಂದೇ ಒಂದು ಬಾರಿ ಮಾತ್ರ ಹೋಗಬೇಕು. ಆ ಹದ್ದುಗಳಿಗೆ ಸ್ವಲ್ಪವೂ ತೊಂದರೆ ಕೊಡದೆ ಹೋಗಿ ಬರಬೇಕು. ಅದಕ್ಕೇನಾದರೂ ಕಷ್ಟ ಕೊಟ್ಟರೆ ಅವು ಕುಕ್ಕಿ ಕಚ್ಚಿ ಸಾಯಿಸಿಬಿಟ್ಟಾವು ಜೋಕೆ! ಮಿರಾಲಿ ಇದನ್ನು ನೆನಪಿನಲ್ಲಿಟ್ಟಿರಬೇಕು. ಅಷ್ಟು ಎತ್ತರದ ಬೆಟ್ಟದ ಮೇಲಕ್ಕೆ ಹೋಗಿ ಬರುವುದು ಸಾಮಾನ್ಯವೇನಲ್ಲ.''

ಮಿರಾಲಿ ಶುಕ ದಂಪತಿಗಳ ಮಾತನ್ನು ಕೇಳಿಸಿಕೊಂಡ.

ಮನದಲ್ಲಿ ಆ ಬೆಟ್ಟಕ್ಕೆ ಹೋಗಿ ಬರಲೇಬೇಕೆಂಬ ದೃಢ ಸಂಕಲ್ಪ ಮೂಡಿತು.

   

ನಿಯೂ ಹಾನ್ ಕೆರೆಗೆ ಹೋಗಿ ಬಟ್ಟೆಗಳಚಿ ಸ್ನಾನ ಮಾಡಿ ಮಡಿಯುಟ್ಟುಕೊಂಡು ಆ ಹದ್ದುಗಳು ನೀರು ಕುಡಿಯಲು ಬರುವುದನ್ನೇ ಕಾಯುತ್ತ ಕುಳಿತುಕೊಂಡ.

ಒಂದು ಹಕ್ಕಿ ಭರ್‍ರನೆ ಬಂದು ತೀರದ ಬಂಡೆಯ ಮೇಲೆ ಕುಳಿತು ನೀರು ಕುಡಿಯಿತು. ನೋಡಿದರೆ ಭಾರೀ ಹಕ್ಕಿ. ಒಂದೊಂದು ಕಾಲುಗಳು ಸೌದೆಯ ತುಂಡಿನಂತಿವೆ. ಆಳೆತ್ತರದ ಹದ್ದು ಕೆಂಗಣ್ಣಿನಿಂದ ನೋಡಿದರೆ ಮೈ ನಡುಗುವಷ್ಟು ಭಯ.

ಮಿರಾಲಿ ನೋಡುತ್ತಲೇ ಇದ್ದ. ಬಿಟ್ಟ ಕಣ್ಣುಗಳನ್ನು ಸಂಚಲಿಸದೆ.

ಒಂದರ ನಂತರ ಮತ್ತೊಂದು ಹದ್ದುಗಳು ಬರುತ್ತಲೇ ಇವೆ. ನೀರು ಕುಡಿದ ಕೂಡಲೇ ರೊಯ್ಯನೆ ಹಾರಿಬಿಡುತ್ತವೆ. ಹತ್ತಿರ ಹೋಗಲೂ ಭಯ. ಆದರೆ, ಹೀಗಿದ್ದು ನರಳೀ ನರಳಿ ಸಾಯುವುದಕ್ಕಿಂತ ಒಮ್ಮೆಗೇ ಸತ್ತು ಹೋಗುವುದು ಒಳ್ಳೆಯದು ಎನ್ನಿಸಿತು. ಮಿರಾಲಿ ಧೈರ್ಯದಿಂದ ಹತ್ತಿರ ಹೋಗಿ ಹದ್ದಿನ ಕಾಲನ್ನು ಬಿಗಿಯಾಗಿ ಹಿಡಿದುಕೊಂಡ. ಭಯದಿಂದ ಜೀವ ನಡುಗುತಿತ್ತು. ಆದರೂ ದೇವರೇ ಗತಿಯೆಂದು ಮನಸ್ಸು ಗಟ್ಟಿ ಮಾಡಿದ.

''ನನ್ನನ್ನು ರೂಬಿ ಹಿಲ್ ಮೇಲೆ ಇಳಿಸು ಮಿತ್ರಾ!'' ಎನ್ನುತ್ತಾ ಬೇಡಿಯೇ ಬೇಡಿದ.

ರಣಹದ್ದು ಮಿರಾಲಿಯ ಬೇಡಿಕೆಯನ್ನು ಮನ್ನಿಸಿ ಭರ್‍ರನೆ

ರತ್ನಗಿರಿಯ ಮೇಲೆ ಹಾರಿತು. ಅದರ ಹಾರಾಟದ ರಭಸ, ರೆಕ್ಕೆ ಬಡಿತದ ಗಾಳಿ ತಾಳಲಾರದಷ್ಟು ಬಿರುಸು. ಹುಡುಗ ಹೆದರಿ ಹೈರಾಣಾದ. ಎಲ್ಲಿ ಕೈಬಿಡುವೆನೋ ಎಂಬ ಭಯದಲ್ಲಿಯೇ ಕ್ಷಣಕ್ಷಣವೂ ಕಳೆಯಿತು. ಸ್ವಲ್ಪ ಹೊತ್ತಿನೊಳಗಾಗಿ ರಣಹದ್ದು ರೂಬಿ ಹಿಲ್ ಮೇಲೆ ಇಳಿಯಿತು. ಮೇಲೆ ಮಟ್ಟಸವಾದ ಸ್ಥಳ. ಎಲ್ಲಿ ನೋಡಿದರೂ ಬಗೆಬಗೆಯ ಹರಳುಗಳು!

ವಜ್ರ-ವೈಢೂರ್ಯ-ಕೆಂಪು-ನೀಲಿ-ಪಚ್ಚೆ ಮುಂತಾದ ಹರಳುಗಳ ರಾಶಿ!

ಯಾವುದನ್ನು ಹೆಕ್ಕಲಿ ಯಾವುದನ್ನು ಬಿಡಲಿ ಎಂಬಷ್ಟು ಆತುರ ಕಾತರ ಮನಸ್ಸಿಗೆ.

ಹುಡುಗ ನೋಡಿಯೇ ನೋಡಿದ. ತಳಥಳ ಮಿಂಚುವ ಅವು ಕಣ್ಣು ಕುಕ್ಕುತ್ತವೆ.

ಮೇಲಾಗಿ ರಣಹದ್ದುಗಳ ಹಿಂಡು! ಒಂದೇ? ಎರಡೇ? ಹಲವಾರು! ಹೋಗುತ್ತವೆ ಬರುತ್ತವೆ. ಅವುಗಳ ಸಂಖ್ಯೆ ಎಷ್ಟೋ ದೇವರಿಗೇ ಗೊತ್ತು. ಆ ಬೃಹದ್ ಪಕ್ಷಿಗಳ ಹಿಂಡಿನಲ್ಲಿ ಇವನೊಬ್ಬ ಪುಟ್ಟ ಹುಡುಗ. ಅವು ಮನಸ್ಸು ಮಾಡಿದರೆ ಒಂದೇ ಒಂದು ಗಳಿಗೆಯಲ್ಲಿ ಇವನನ್ನು ಮುಗಿಸಿ ಬಿಡಬಹುದು! ಮಿರಾಲಿ ಎಲ್ಲವನ್ನೂ ಮಿಕಿಮಿಕಿ ನೋಡಿದ. ಅವು ಚಿಕ್ಕವನೆಂದೋ ಏನೋ, ಅವನನ್ನು ಸುತ್ತುವರಿದು ಮುಖ ಮೈಯನ್ನೆಲ್ಲ ಮುದ್ದಿಸುವಂತೆ ಕೊಕ್ಕಿನಿಂದ ಮುಟ್ಟಿ ಮುಟ್ಟಿ ಮೂಸಿ ಮೂಸಿ ನೋಡಿದುವು. ಅವು ಹತ್ತಿರ ಹತ್ತಿರ ಬಂದಷ್ಟೂ ಹುಡುಗನಿಗೆ ಭಯವೋ ಭಯ. ಬೆದರುಗಣ್ಣುಗಳಿಂದಲೇ

ಅವುಗಳನ್ನು ನೋಡಲಾರದೇ ನೋಡಿದ.

ಯಜಮಾನ ಹದ್ದು ಕೇಳಿತು.

''ನೀನು ಭಯಪಡಬೇಕಾಗಿಲ್ಲ. ನಾವು ನಿನ್ನ ಏನೂ ಮಾಡುವುದಿಲ್ಲ. ನಿನಗೆ ಬೇಕಾದಷ್ಟು ಕಲ್ಲುಗಳನ್ನು ಹೆಕ್ಕಿಕೊ. ನಿನ್ನನ್ನು ಕರೆದೊಯ್ದು ಬಿಟ್ಟುಬರುವೆ.''

ಹುಡುಗ ಕೈಚೀಲದ ತುಂಬ ರನ್ನದ ಹರಳುಗಳನ್ನು ಆಯ್ದು ತುಂಬಿಕೊಂಡ.

''ಹ್ಞೂ! ನನ್ನ ಕಾಲುಗಳನ್ನು ಬಿಗಿಯಾಗಿ ಹಿಡಿದುಕೋ'' ಅಪ್ಪಣೆ ಮಾಡಿತು ಹಿರಿಯ ಹದ್ದು.

''ಆಗಲಿ, ಹದ್ದುಗಳೇ! ನಿಮಗೆ ತುಂಬ ವಂದನೆಗಳು!''

ಹುಡುಗ ಚೀಲವನ್ನು ಭುಜಕ್ಕೆ ನೇತು ಹಾಕಿಕೊಂಡು ಹದ್ದಿನ ಕಾಲುಗಳನ್ನು ಬಿಗಿಯಾಗಿ ಹಿಡಿದುಕೊಂಡ. ಕೂಡಲೇ ಹದ್ದು ಹಾರಿ ಬಂದು ನಿಯೂ ಹಾನ್ ಕೆರೆಯ ಬಳಿ ಇಳಿಯಿತು. ಹುಡುಗ ಆನಂದತುಂದಿಲತೆಯಿಂದ ಹದ್ದಿಗೆ ವಂದನೆ ಸಲ್ಲಿಸಿದ.

   

ಹುಡುಗ ರೂಬಿಗಳನ್ನು ರತ್ನ ವ್ಯಾಪಾರಿಯಲ್ಲಿ ವಿಕ್ರಯಿಸಿ ಅಪಾರವಾದ ಹಣವನ್ನು ಗಳಿಸಿದ. ಮೊದಲು ಅದರಿಂದ ತಂದೆ ತಾಯಿ ಮತ್ತು ಒಡಹುಟ್ಟುಗಳಿಗಾಗಿ ಆಸ್ತಿ ಮನೆಯನ್ನು ಕೊಂಡುಕೊಂಡ. ಅನಂತರ ಮಕ್ಕಳೆಲ್ಲರನ್ನೂ ಶಾಲೆಗೆ ಸೇರಿಸಿದ. ಬಳಿಕ ತನಗೊಂದು ಆಸ್ತಿ ಮನೆಯನ್ನು ಕೊಂಡುಕೊಂಡ. ಅಲ್ಲಿಗೆ ಹಣದ ಥೈಲಿ ಮುಗಿಯಿತು. ಜಮೀನಿನಲ್ಲಿ ದುಡಿದು ಸಂಪಾದಿಸುವುದರೊಂದಿಗೆ ವಿದ್ಯೆ ಬುದ್ಧಿಯನ್ನೂ ಕಲಿತು ಸಭ್ಯ ಗೃಹಸ್ಥನಾದ.

ಶ್ರೀಮತಿಕೆಯಿದ್ದೆಡೆಯಲ್ಲಿ
ಸಂತೃಪ್ತಿಯ ಸುಳಿವು ಇರದು
ಸಂತೃಪ್ತಿ ಇದ್ದೆಡೆಯಲ್ಲಿ
ಶ್ರೀಮತಿಕೆಯ ಸುಳಿವು ಇರದು



ರೂಬಿ ಹಿಲ್-೫೩

# ಜೈ ಜ್ಞಾನಾರ್ಥಿ !

ನಿಚ್ಚಂ ಜಗದ ಸಂಕಟ ತೊಳೆಯೆ
ಸರ್ವಾಂಗೀಣ ಸಹಕಾರ ಬೆಳೆಯೆ
ಸರ್ವೋದಯ ನೇಮದಿಂದೆ-

ಕಡು ಬಡತನ-ಸಿರಿತನ-ಪರತನ
ಜಡಿಕಟ್ಟಿ-ಅಡಿಮೇಲಾಗಿಸೆ, ಸುಜನ
ಸಮತೋಲನ ಭಾವದಿಂದೆ-

ನಿರಕ್ಷರ-ನಿರ್ವೀರ್ಯ-ನಿರಾಸಕ್ತ
ನಿಃಸತ್ವ-ನಿಷ್ಪ್ರಯೋಜನ-ನಿವೃತ್ತಿ
ನಿಸ್ಸಾರಗಳ ನಿರ್ನಾಮದಿಂದೆ-

ಅಂತೇವಾಸಿಗಳ ಸರ್ವೋದ್ಧಾರ !
ಸಂಜೀವನಾ ಪರಮಪಾವನಾ
ಜೈ ಜ್ಞಾನಾರ್ಥಿ ! ಜೈ ಜ್ಞಾನಧನ !

# ಲಕ್ಷ್ಮೀ ಪ್ರಕಾಶನ

359, ಕಡಿದಾಳ್ ನಿಲಯ, 14ನೇ ಅಡ್ಡರಸ್ತೆ, ಸದಾಶಿವನಗರ
ಬೆಂಗಳೂರು - 560 080

## ಮಲ್ಲಿಕಾ ಕೃತಿಗಳು (ಕಾದಂಬರಿಗಳು)

೧. ಜೀವನಗಂಗಾ
೨. ಡಾ॥ ಅಘೋರ
೩. ಡಾ॥ ಕಮಲೇಶ್
೪. ವಂದೇ ಮಾತರಂ
೫. ಅನಂತಾನಂತದೆಡೆಗೆ
೬. ಮನೋನ್ಮಣಿ
೭. ಸಂತ್ರಾಸಿನಿ
೮. ಆಸೆಯ ಸುಳಿಯಲ್ಲಿ
೯. ಪದ್ಮಾಲಯ
೧೦. ಶ್ರದ್ಧಾಲಯ
೧೧. ಕಮಲಾನಿ ಕಥಾ (ಕಥಾ ಸಂಕಲನ)
೧೨. ಬಹುರತ್ನವಸುಂಧರಾ
೧೩. ರತ್ನಗರ್ಭಾವಸುಂಧರಾ
೧೪. ಸುಧಾಮಣಿ
೧೫. ರಮಣೀಮಣಿ
೧೬. ಲಿಯೋನಾ
೧೭. ಶ್ರೀಮುಖಿ
೧೮. ಶ್ರೀಹರ್ಷಲಾ
೧೯. ವೈಶಾಖೀಪರ್ವ
೨೦. ಫಾಲ್ಗುಣೀಪರ್ವ
೨೧. ಮಣಿಮೇಖಲಾ
೨೨. ಮಣಿಕರ್ಣಿಕಾ (ಕವಿತಾ ಸಂಕಲನ)
೨೩. ಪೂಜವಸಾನ ಸಮಯೇ..!
೨೪. ಧ್ಯಾನಾವಸಾನ ಸಮಯೋ..!
೨೫. ಗಗನ ಕುಸುಮ
೨೬. ಜೀವನ ಕುಸುಮ
೨೭. ಚಂಪಕರಾಜಿ
೨೮. ಬಕುಳರಾಜಿ
೨೯. ಕಸ್ತೂರಿ ಮಾಲಿಕಾ
೩೦. ಮಂದಾರ ಮಾಲಿಕಾ
೩೧. ವಿಜಯ ಗಾಥಾ
೩೨. ಗಾನ ತೀರ್ಥ
೩೩. ನಾದ ಬಿಂದು
೩೪. ಕವ್ಯಾನಂದ ನಂದಿನಿ
೩೫. ಭಾವನಂದ ನಂದಿನಿ
೩೬. ಸಂಗೀತ ಪುಷ್ಪಾಂಜಲಿ
೩೭. ಆತ್ಮ ಗೀತಾಂಜಲಿ (ಸಂಜೀವನ ಕಾವ್ಯ)
೩೮. ಮಂಗಳ ಭಾರತಿ
೩೯. ಕಲ್ಯಾಣ ಭಾರತಿ
೪೦. ಉತ್ತರೋತ್ತರಣಿ
೪೧. ರಾಗಾನುರಾಗಿಣಿ
೪೨. ಪ್ರಪುಲ್ಲ ಭಾರತ (ಪೌರಾಣಿಕ ನಾಟಕ)
೪೩. ಪುಣ್ಯಾಭಿಸಾರ
೪೪. ಪುಣ್ಯಪಯೋನಿಧಿ (ಸಾನೆಟ್‌ಗಳು)
೪೫. ತರಂಗಿಣಿ (ಗದ್ಯಕಾವ್ಯ)
೪೬. ಐಂದ್ರ ಕೀರ್ತಿ ಕೇತನಂ (ಉಪನಿಷತ್ಕಥಾ)
೪೭. ಕೃತಂ ಸ್ಮರ ಕ್ರತುಂ ಸ್ಮರ (ಶಿಶು ಸಾಹಿತ್ಯ)
೪೮. ದೂರ ದೇಶದಲ್ಲಿ
೪೯. ಬೆಳದಿಂಗಳ ರಾತ್ರಿ
೫೦. ರಂಗನ ಸಾಹಸ
೫೧. ಓಹಿಯೋಜ ಸರೋವರ
೫೨. ಕೌಶಿಕನ ಗೊಂಬೆ
೫೩. ವಿಶೇಷ ಸುದ್ದಿ
೫೪. ಕಲ್ಯಾಣಿ ರಾಗಿಣಿ (ಮಹಾಕಾವ್ಯ)
೫೫. ಶ್ರೀ ವಿವೇಕಾನಂದ ವಿಜಯಂ